# ಶುದ್ಧಶೈವ ಮತ್ತು ಗೋಳಕಿಮಠ ಸಂಪ್ರದಾಯ

ಡಾ. ಎಂ. ಎಂ. ಕಲಬುರ್ಗಿ





ಲಿಂಗಾಯತ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ

# ಶುದ್ಧ ಶೈವ ಮತ್ತು ಗೋಳಕಿಮಠ ಸಂಪ್ರದಾಯ

(ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶ)

ಲಿಂಗಾಯತ ನೂತನ ಸಾಹಿತ್ಯರತ್ನ ಮಾಲೆ : ೨೯

# ಶುದ್ಧಶೈವ ಮತ್ತು ಗೋಳಕಿಮಠ ಸಂಪ್ರದಾಯ

## (ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶ)

ಸಂಪಾದಕರು
ಎಂ.ಎಂ.ಕಲಬುರ್ಗಿ

ಲಿಂಗಾಯತ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಗದಗ
೨೦೦೫

ಶುದ್ಧ ಶೈವ ಮತ್ತು ಗೋಳಕಿಮಠ ಸಂಪ್ರದಾಯ

ಸಂಪಾದಕರು: ಡಾ. ಎಂ.ಎಂ. ಕಲಬುರ್ಗಿ

ಪ್ರಕಾಶಕರು :
ಲಿಂಗಾಯತ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ

ಗ್ರಂಥದಾಸೋಹ
ಶ್ರೀಮತಿ ಗೌರಮ್ಮ ಬಸವಣ್ಣಯ್ಯ ಹಿರೇಮಠ, ಗದಗ

ಪ್ರಥಮ ಆವೃತ್ತಿ : ೨೦೦೫
ಬೆಲೆ : ರೂ. ೫೦.೦೦

ಅಕ್ಷರ ಸಂಯೋಜನೆ :
ವಚನ ಗ್ರಾಫಿಕ್ಸ್, ಧಾರವಾಡ

ಮುದ್ರಣ :
ಪ್ರಭು ಗ್ರಾಫಿಕ್ಸ್, ಗದಗ

## ಪ್ರಕಾಶಕರ ನುಡಿ

ಹದಿನೈದನೆಯ ಶತಮಾನದಲ್ಲಿ ಲಿಂಗಾಯತ ಧರ್ಮ, ಸಮಾಜ, ಸಾಹಿತ್ಯ, ಸಂಸ್ಕೃತಿಗಳ ಪುನರುದ್ಧಾರಕರಾಗಿ ಅವತಾರವೆತ್ತಿದ ಶ್ರೀ ತೋಂಟದ ಸಿದ್ಧಲಿಂಗಶಿವಯೋಗಿಗಳಿಗೂ ಅವರ ಶಿಷ್ಯ-ಪ್ರಶಿಷ್ಯ ಪರಂಪರೆಗೂ ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಅತ್ಯಂತ ಗೌರವಾನ್ವಿತವಾದ ಸ್ಥಾನವಿದೆ. ವಚನಸಾಹಿತ್ಯ, ಕಾವ್ಯಸಾಹಿತ್ಯ ನಿರ್ಮಾಣದೊಂದಿಗೆ ಪ್ರಾಚೀನ ವಚನಸಾಹಿತ್ಯದ ಅಕ್ಷಯನಿಧಿಯನ್ನು ಶೋಧಿಸಿ, ಸಂಸ್ಕರಿಸಿ, ಸಂಪಾದಿಸಿ, ವಚಿಸಿ, ವ್ಯಾಖ್ಯಾನಿಸಿ ಕನ್ನಡಸಾಹಿತ್ಯದಲ್ಲಿ 'ಸಂಪಾದನ ಸಮಯ'ವೆಂಬ ಮಾರ್ಗಕ್ಕೆ ಕಾರಣಕರ್ತರಾದ ಹಿರಿಮೆ ಅವರದಾಗಿದೆ.

ತೋಂಟದ ಸಿದ್ಧಲಿಂಗಯತಿಗಳ ಪ್ರಭಾವಲಯದಲ್ಲಿ ಬೆಳಗಿದ ಸಾಹಿತ್ಯಜ್ಯೋತಿಗಳು ಅನಂತ. ಜಾಗತಿಕ ತತ್ವಮಹಾಂತನೆನ್ನಿಸಿದ ಪ್ಲೇಟೋನ ಸಂಭಾಷಣೆಗೂ ಮಿಗಿಲೆನ್ನಿಸುವ "ಶೂನ್ಯಸಂಪಾದನೆ"ಶಿಲ್ಪದ ಮಹಾ ರೂವಾರಿಗಳಾದ ಹಲಗೆಯಾರ್ಯ, ಗುಮ್ಮಳಾಪುರ ಸಿದ್ಧಲಿಂಗ, ಗೂಳೂರು ಸಿದ್ಧವೀರಣ್ಣೊಡೆಯ; ವಚನಸಂಕಲನಕಾರರೆಂದು ಪ್ರಸಿದ್ಧರಾದ ಸಂಪಾದನೆಯ ಚೆನ್ನಂಜೇದೇವ, ಸಂಪಾದನೆಯ ಸಿದ್ಧವೀರಣಾರ್ಯ, ಸಂಪಾದನೆಯ ಗುರುಶಾಂತದೇವ; ಸ್ವತಂತ್ರ ವಚನಕಾರರಾಗಿ ಖ್ಯಾತಿವೆತ್ತ ಸ್ವತಂತ್ರ ಸಿದ್ಧಲಿಂಗ. ಘನಲಿಂಗಿದೇವ; ಯಜುರ್ವೇದಭಾಷ್ಯಕ್ಕೆ ಕನ್ನಡ ಟೀಕೆ ಬರೆದ ಗುರುನಂಜ, ವಚನಗಳ ಟೀಕಾಕಾರನಾದ ಸೋಮಶೇಖರಶಿವಯೋಗಿ; ಶ್ರೇಷ್ಠ ಪುರಾಣಗಳನ್ನು ರಚಿಸಿದ ಗುಬ್ಬಿಯ ಮಲ್ಲಣಾರ್ಯ, ಮಲ್ಲಿಕಾರ್ಜುನ, ಚೇರಮಾಂಕ, ಸಂಪಾದನೆಯ ಪರ್ವತೇಶ-ಹೀಗೆ ನೂರಾರು ಕವಿಗಳ, ಸಾವಿರಾರು ಸಾಹಿತ್ಯಕೃತಿಗಳ ನಿರ್ಮಾಣಕ್ಕೆ ಕಾರಣರಾದವರು, ತೋಂಟದ ಸಿದ್ಧಲಿಂಗಯತಿಗಳು. ಹೀಗಾಗಿ ಸಾಹಿತ್ಯಕೃತಿಗಳನ್ನು ಸಂಗ್ರಹಿಸುವದು, ಶೋಧಿಸುವದು, ಪ್ರಕಟಿಸುವದು, ಪ್ರಚುರಿಸುವದು ತೋಂಟದ ಸಿದ್ಧಲಿಂಗ ಪರಂಪರೆಯವರ ಆದ್ಯಕರ್ತವ್ಯವಾಗಿದೆ.

ಈ ಕರ್ತವ್ಯಪ್ರಜ್ಞೆಗೆ ಬದ್ಧವಾಗಿ ಶ್ರೀಮಠದಲ್ಲಿ "ಲಿಂಗಾಯತ ಅಧ್ಯಯನಸಂಸ್ಥೆ" ಅಸ್ತಿತ್ವಕ್ಕೆ ಬಂದಿದ್ದು, ಅದರ ಇಂದಿನ ಧ್ಯೇಯಗಳು ಇಂತಿವೆ.

೧. ಲಿಂಗಾಯತ ಹಸ್ತಪ್ರತಿ, ಪ್ರಾಚ್ಯವಸ್ತುಗಳ ಸಂಗ್ರಹ ಮತ್ತು ಸಂರಕ್ಷಣೆ.

೨. ಲಿಂಗಾಯತ ಪುರಾತನ, ನೂತನ ಕೃತಿಗಳ ಗ್ರಂಥಭಾಂಡಾರ ಸ್ಥಾಪನೆ.

೩. "ಲಿಂಗಾಯತ ಪುರಾತನ ಸಾಹಿತ್ಯರತ್ನಮಾಲೆ" ಹೆಸರಿನಲ್ಲಿ ಪ್ರಾಚೀನ ಕೃತಿಗಳ ಪ್ರಕಟಣೆ.
೪. "ಲಿಂಗಾಯತ ನೂತನ ಸಾಹಿತ್ಯ ರತ್ನಮಾಲೆ" ಹೆಸರಿನಲ್ಲಿ ಧರ್ಮ, ಸಂಸ್ಕೃತಿ, ಸಾಹಿತ್ಯ, ಸಮಾಜಗಳಿಗೆ ಸಂಬಂಧಪಟ್ಟ ಕೃತಿಗಳನ್ನು ಪ್ರಕಟಿಸುವದು.
೫ "ಲಿಂಗಾಯತ ಅಪ್ರಕಟಿತ ಪ್ರಾಚೀನ ಸಾಹಿತ್ಯ ಪ್ರಕಟನಾ ಯೋಜನೆ"ಯ ಮೂಲಕ ಪ್ರಾಚೀನ ಲಿಂಗಾಯತ ಅಪ್ರಕಟಿತ ಕೃತಿಗಳನ್ನು ಪ್ರಕಟಿಸುವದು.
೬. "ಲಿಂಗಾಯತ ಪುಣ್ಯಪುರುಷ ಸಾಹಿತ್ಯ ರತ್ನಮಾಲೆ" ಹೆಸರಿನಲ್ಲಿ ಲಿಂಗಾಯತ ಗಣ್ಯ ವ್ಯಕ್ತಿಗಳ ಚರಿತ್ರೆಗಳನ್ನು ಪ್ರಕಟಿಸುವದು.
೭. "ಲಿಂಗಾಯತ ಅನುವಾದ ಸಾಹಿತ್ಯ ರತ್ನಮಾಲೆ" ಹೆಸರಿನಲ್ಲಿ ಲಿಂಗಾಯತ ಉತ್ತಮೋತ್ತಮ ಗ್ರಂಥಗಳನ್ನು ಅನ್ಯಭಾಷೆಗಳಿಗೆ ಅನುವಾದಿಸಿ, ಪ್ರಕಟಿಸುವದು.
೮. ವಿದ್ವಾಂಸರಿಂದ "ಲಿಂಗಾಯತ ಗೋಷ್ಠಿ" ನಡೆಸುವದು.

ಈಗ "ಲಿಂಗಾಯತ ನೂತನ ಸಾಹಿತ್ಯರತ್ನ ಮಾಲೆ"ಯ ಅಂಗವಾಗಿ "ಶುದ್ಧಶೈವ ಮತ್ತು ಗೋಳಕಿಮಠ ಸಂಪ್ರದಾಯ (ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶ)" ಹೆಸರಿನ ಕೃತಿಯನ್ನು ಪ್ರಕಟಿಸುತ್ತಿದ್ದೇವೆ. ೧೨ನೆಯ ಶತಮಾನದ ಶರಣ ಚಳುವಳಿಯ ಪರಿಸರ ಮತ್ತು ಇತಿಹಾಸಗಳನ್ನು ಅರ್ಥಮಾಡಿಕೊಳ್ಳಲು ನೆರವಾಗುವ ಈ ಕೃತಿಯನ್ನು ಸಿದ್ಧಪಡಿಸಿಕೊಟ್ಟ ಡಾ. ಎಂ.ಎಂ. ಕಲಬುರ್ಗಿ, ಡಾ.ಸಿ.ಆರ್.ಯರವಿನತೆಲಿಮಠ, ಪ್ರೊ. ಸದಾನಂದ ಕನವಳ್ಳಿ ಅವರಿಗೂ, ಗ್ರಂಥದಾಸೋಹ ಪೂರೈಸಿದ ಶ್ರೀಮತಿ ಗೌರಮ್ಮ ಬಸವಣ್ಣಯ್ಯ ಹಿರೇಮಠ ಅವರಿಗೂ, ಬೆರಳಚ್ಚು ಪೂರೈಸಿದ ಶ್ರೀ ದೇವರಾಜ ನಾಡಿಗ ಅವರಿಗೂ, ಮುದ್ರಿಸಿದ ಪ್ರಭು ಗ್ರಾಫಿಕ್ಸ ಒಡೆಯರಿಗೂ ಜಗದ್ಗುರು ಶ್ರೀ ಎಡೆಯೂರ ಸಿದ್ಧಲಿಂಗೇಶ್ವರನು ಸನ್ಮಂಗಲವನ್ನು ಕರುಣಿಸಲಿ.

ಶ್ರೀ ಜಗದ್ಗುರು ತೋಂಟದಾರ್ಯ ಮಠ
ಗದಗ

ಪ್ರಕಾಶಕರು
ಲಿಂಗಾಯತ ಅಧ್ಯಯನ ಸಂಸ್ಥೆ

# ಎರಡು ಮಾತು

## ಎಂ.ಎಂ. ಕಲಬುರ್ಗಿ

ಹನ್ನೆರಡನೆಯ ಶತಮಾನದ ಶರಣಧರ್ಮವೆಂಬ ಕುದಿಯುವ ಪಾತ್ರೆಯಲ್ಲಿ ಸಮಕಾಲೀನ ಅನೇಕ ಮತ-ಪಂಥಗಳು ಕರಗಿಹೋದವು. ಇವುಗಳಲ್ಲಿ ಶಿವಪರವಾಗಿದ್ದ ಕಾರಣ ಪರಿಶಿಷ್ಟ ನೆಲೆಯ ನಾಥಶೈವ ಮತ್ತು ಶಿಷ್ಟನೆಲೆಯ ನಾಲ್ಕು ಧರ್ಮಗಳಾದ ಪಾಶುಪತಶೈವ, ನಕುಲೀಶಶೈವ(ಕಾಳಾಮುಖ), ಮಹಾವ್ರತಶೈವ(ಸೋಮ, ಕಾಪಾಲಿಕ), ಶುದ್ಧಶೈವ (ಶ್ರೋತ್ರೀಯ, ಸಿದ್ಧಾಂತ, ಮಾಹೇಶ್ವರ, ಶಿವಸಮಯ, ಭಿಕ್ಷಾವೃತ್ತಿ, ಶ್ರೀಕಂಠ)ಗಳು ಸಹಜವಾಗಿಯೇ ಬೇಗ ಕರಗಿದವು. ಸಗರ ಶಾಸನವು(೧೦೭೧)ಅನಂತಶಕ್ತಿ ಹೆಸರಿನ ಕಾಳಾಮುಖಯತಿಯನ್ನು "ಕಾಳಾಮುಖ, ಮಹಾವ್ರತ, ಪಾಶುಪತ, ಶಿವಸಮಯ ಸಮಾನಪಕ್ಷಪಾತರ್" ಎಂದು ಕರೆದಿರುವುದರಿಂದ, ಇವೆಲ್ಲ ಬಹುಶಃ ಒಂದೇ ಮೂಲದ ಶಾಖೆಗಳೆಂದು ಹೇಳಬಹುದಾಗಿದೆ.

ಶ್ರೀವತ್ಸಗೋತ್ರ ಮೊದಲಾದ ಬ್ರಾಹ್ಮಣಗೋತ್ರಗಳನ್ನು-ಪಂಚಾಕ್ಷರಿಯೊಂದಿಗೆ ಗಾಯತ್ರಿ ಮಂತ್ರವನ್ನು ಬಳಸುವ ಮೂಲಕ, ಇವರು "ವೈದಿಕ ಬ್ರಾಹ್ಮಣ"ರಿಗೆ ಸಮಾಂತರದ "ಆಗಮಿಕ ಬ್ರಾಹ್ಮಣ"ರೆಂದು ಪರಿಗಣಿತರಾಗಿದ್ದರು.

ಡಾ. ಡೆವಿಡ್ ಲೊರೆಂಜಿನ್ ಮೊದಲಾದ ವಿದ್ವಾಂಸರು ಈ ನಾಲ್ಕು ಶೈವಗಳಲ್ಲಿ ಪಾಶುಪತ (ಸಿಂಹಪರ್ಷೆ), ನಕುಲೀಶ (ಶಕ್ತಿಪರ್ಷೆ, ಕಾಳಾಮುಖ), ಮಹಾವ್ರತ (ಸೋಮ, ಕಾಪಾಲಿಕ)- ಈ ಮೂರರ ಅಧ್ಯಯನ ಪೂರೈಸಿದರೇ ಹೊರತು, ಇವೆಲ್ಲವುಗಳಿಗಿಂತ ಮುಖ್ಯವಾದ ಶುದ್ಧಶೈವದ ಬಗೆಗೆ ಹೊರಳಿ ನೋಡಲಿಲ್ಲ. ಅಂದರೆ ಗುರುತು ಸಿಗದಂತೆ ಕರಗಿಹೋಗಿದ್ದ ಆ ಮೂರನ್ನು ಅಭ್ಯಸಿಸಿದ ಇವರು, ಹರಿಹರ, ಕೆರೆಯ ಪದ್ಮರಸ, ಮಗ್ಗೆಯ ಮಾಯಿದೇವ, ಮಹಾಲಿಂಗದೇವರ ಮೂಲಕ ಅರ್ಧಂಬರ್ಧ ಅಸ್ತಿತ್ವ ಉಳಿಸಿಕೊಂಡಿದ್ದ ಶುದ್ಧಶೈವದ ಅಧ್ಯಯನ ನಡೆಸಲೇ ಇಲ್ಲ.

ಹೀಗೆ ಉದ್ದಕ್ಕೂ ಉಪೇಕ್ಷಿತವಾಗಿದ್ದ ಈ ಶಾಖೆಯ ಅಭ್ಯಾಸ ನನ್ನಲ್ಲಿ ಸೆಲೆಯೊಡೆದುದು, ಆಂಧ್ರಪ್ರದೇಶದ ಮಲ್ಕಾಪುರ ಶಾಸನವನ್ನು ಕುರಿತ ಡಾ. ನಂದಿಮಠ

ಅವರ ಪ್ರಬಂಧದ ಮೂಲಕ. ಅಲ್ಲಿ ಬಳಕೆಯಾದ ದೂರ್ವಾಸ ಸಂಪ್ರದಾಯ, ಗೋಲಕಿ (ಗೋಲಗಿರಿ) ಮಠ, ಶುದ್ಧಶೈವ ಪದಗಳು ಪರಸ್ಪರ ಸಂಬಂಧ ಸೂಚಕ ಶಬ್ದಗಳೆಂದು ಗೊತ್ತಾಗುತ್ತಲೇ, ಶಾಸನ-ಕಾವ್ಯ-ಅವಶೇಷಗಳು ನಮ್ಮ ನಾಡಿನಲ್ಲಿ ಹರಡಿದ್ದ ಶುದ್ಧಶೈವದ ಜಾಲವನ್ನು ನನ್ನ ಕಣ್ಣ ಮುಂದೆ ಬಿಡಿಸಿ ನಿಲ್ಲಿಸಿದವು. ಅಧ್ಯಯನ ಮುಂದುವರಿಯುತ್ತಿದ್ದಂತೆ B.G.L. Swamy ಅವರ "The Golaki School of Saivism in the Tamil Country"[೧] ಲೇಖನ ನನ್ನ ಗಮನಕ್ಕೆ ಬಂದು, ಅನೇಕ ಸಂದೇಹಗಳು ನಿವಾರಣೆಯಾದವು. ಇನ್ನೊಂದು ಹಂತದಲ್ಲಿ Cynthia Talbot ಅವರ "Golaki Math inscriptions from Andhra Pradesh: A study of a Saiva Monastic Lineage"[೨] ಲೇಖನ ಗಮನ ಸೆಳೆದು, ಈ ಕ್ಷೇತ್ರದ ನಿಜಸ್ವರೂಪವನ್ನು ಸ್ಪಷ್ಟಪಡಿಸಿತು.

ಮೇಲೆ ಹೇಳಿದ ನಾಲ್ಕೂ ಶೈವಗಳು ೧೨ನೆಯ ಶತಮಾನದ ಬಸವಸಂಪ್ರದಾಯದಲ್ಲಿ ಕರಗಿಹೋದರೂ, ಇವುಗಳಲ್ಲಿ ಶುದ್ಧಶೈವ ಮಾತ್ರ ೧೪ನೆಯ ಶತಮಾನದಲ್ಲಿ ತಮಿಳುನಾಡಿನ ಅರುವತ್ಮೂರು ಪುರಾತನರ ಶೈವಸಂಪ್ರದಾಯವನ್ನು ತನ್ನಂತೆ ಪರಿವರ್ತಿಸಿಕೊಂಡ ರೀತಿಯಲ್ಲಿ, ೧೫ನೆಯ ಶತಮಾನದಲ್ಲಿ ಕರ್ನಾಟಕದ ಶರಣಸಂಪ್ರದಾಯವನ್ನೂ ಅದು ಕ್ರಮೇಣ (ವೀರ) ಶೈವೀಕರಿಸಿಕೊಂಡಿತು. ಇದರ ಫಲವಾಗಿ, ನಮ್ಮಲ್ಲಿ ಈ ಶುದ್ಧಶೈವ ಬ್ರಾಹ್ಮಣರೂ ಇವರ ಪ್ರಭಾವದಿಂದ ಮಿಕ್ಕ ಮೂರು ಶಾಖೆಗಳ ಶಿವಬ್ರಾಹ್ಮಣರೂ ಜಂಗಮರಾಗಿ ಬೆಳೆದರು. ಇವರಿಂದಾಗಿಯೇ ಚತುರಾಚಾರ್ಯಪೀಠ, ಆಮೇಲೆ ಪಂಚಾಚಾರ್ಯಪೀಠ ವ್ಯವಸ್ಥೆ ಹುಟ್ಟಿಕೊಂಡಿತು. ಇದೆಲ್ಲಕ್ಕೂ ಸಿದ್ಧಾಂತಶೈವವೇ ಕಾರಣವಾಗಿದ್ದುದರಿಂದ, ಈ ಹೆಸರನ್ನು ಬಳಸಿ 'ಸಿದ್ಧಾಂತಶಿಖಾಮಣಿ' ಹೆಸರಿನ ಧರ್ಮಗ್ರಂಥವನ್ನೂ ರಚಿಸಿಕೊಂಡಿತು.

ಹೀಗೆ ಕರ್ನಾಟಕದ ಶರಣಧರ್ಮದಲ್ಲಿ ಲೀನವಾಗುತ್ತಲೇ, ಅದರ ಮೇಲೆ ಸವಾರಿ ಮಾಡಿದ ಈ ಶುದ್ಧಶೈವದ ಶೋಧ ಮಹತ್ವದ್ದೆಂದೇ ಹೇಳಬೇಕು. ಆದುದರಿಂದ ಕರ್ನಾಟಕದ ಶುದ್ಧಶೈವದ ಬಗ್ಗೆಯೂ ಒಂದು ಲೇಖನ ಬರೆಯಬೇಕೆಂಬ ಆಸೆ ನನ್ನಲ್ಲಿ ಚಿಗುರಿತು. ಅನೇಕ ಮೂಲಗಳಿಂದ ಮಾಹಿತಿ ಸಂಗ್ರಹಿಸಿ "ಕರ್ನಾಟಕ:ಶುದ್ಧಶೈವ ಮತ್ತು ಗೋಳಕಿಮಠ ಸಂಪ್ರದಾಯ" ಹೆಸರಿನ ಲೇಖನ ಸಿದ್ಧಪಡಿಸಿದೆನು. ನನ್ನ ಆಸಕ್ತಿ ಇಷ್ಟಕ್ಕೆ ನಿಲ್ಲದೆ, ಮೇಲೆ ಹೇಳಿದ ಲೇಖನಗಳ ಕನ್ನಡಾನುವಾದದ ಆವಶ್ಯಕತೆಯನ್ನು ಗುರುತಿಸಿತು. ನನ್ನ ಇಂಥ ಶೈಕ್ಷಣಿಕ ಕನಸುಗಳು ಸಾಕಾರಗೊಳ್ಳುವಲ್ಲಿ ನಿರಂತರ ನೆರವಾಗುತ್ತ ಬಂದ ಡಾ. ಸಿ.ಆರ್. ಯರವಿನತೆಲಿಮಠ, ಪ್ರೊ. ಸದಾನಂದ ಕನವಳ್ಳಿ ಅವರು ಈ ಎರಡೂ ಲೇಖನಗಳನ್ನು ಅಚ್ಚುಕಟ್ಟಾಗಿ ಕನ್ನಡಕ್ಕೆ ಅನುವಾದಿಸಿದರು.

---

೧. The Journal of Indian History, LIII. Pt II. p. 181
೨. Vajaypeya (K.D. Bajapai Felicitation volume) Vol. I. p. 133

ಈ ಮೂರು ಲೇಖನಗಳನ್ನು ಈಗ "ಶುದ್ಧಶೈವ ಮತ್ತು ಗೋಳಕಿಮಠ ಸಂಪ್ರದಾಯ: ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶ" ಹೆಸರಿನಿಂದ ಪುಸ್ತಕರೂಪದಲ್ಲಿ ಪ್ರಕಟಿಸುವ ಮೂಲಕ, ಈ ವರೆಗೆ ಮುಚ್ಚಿಹೋಗಿದ್ದ ಒಂದು ಮುಖ್ಯ ಬಾಗಿಲು ತೆರೆದುಕೊಳ್ಳುವುದೆಂಬ ವಿಶ್ವಾಸ ತಾಳಿದ್ದೇನೆ. ನಮ್ಮನಾಡಿನ ಶರಣಧರ್ಮದ ಉಗಮ, ವಿಕಾಸಗಳನ್ನು ತಿಳಿದುಕೊಳ್ಳಲು ಇದು ನೆರವಾಗುವುದೆಂದು ನಂಬಿದ್ದೇನೆ. ಮೂಲ ಇಂಗ್ಲೀಷ್ ಲೇಖಕರಾದ ಬಿ.ಜಿ.ಎಲ್.ಸ್ವಾಮಿ, ಸಿಂಥಿಯಾ ಟ್ಯಾಲ್ಬಟ್ ಅವರಿಗೂ ಅನುವಾದಕರಾದ ಡಾ. ಸಿ.ಆರ್. ಯರವಿನತೆಲಿಮಠ, ಪ್ರೊ. ಸದಾನಂದ ಕನವಳ್ಳಿ ಅವರಿಗೂ ಕೃತಜ್ಞನಾಗಿದ್ದೇನೆ.

ಈ ಕೃತಿ ಗದುಗಿನ ಈ ತೋಂಟದಾರ್ಯಮಠದ "ಲಿಂಗಾಯತ ಅಧ್ಯಯನ ಸಂಸ್ಥೆ"ಯ ಮೂಲಕ ಪ್ರಕಟಗೊಳ್ಳಲು ಸಮ್ಮತಿಸಿದ ಪೂಜ್ಯ ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರಿಗೆ ಭಕ್ತಿಪೂರ್ವಕ ಪ್ರಣಾಮಗಳು. ಗ್ರಂಥದಾಸೋಹಿಗಳಾದ ಶ್ರೀಮತಿ ಗೌರಮ್ಮ ಬಸವಣ್ಣಯ್ಯ ಹಿರೇಮಠ ಅವರಿಗೂ, ಅಚ್ಚುಕಟ್ಟಾಗಿ ಬೆರಳಚ್ಚು ಪೂರೈಸಿದ ವಚನ ಗ್ರಾಫಿಕ್ಸ್‌ನ ಶ್ರೀ ದೇವರಾಜ ನಾಡಿಗ ಅವರಿಗೂ, ಅಂದವಾಗಿ ಮುದ್ರಿಸಿದ ಗದುಗಿನ ಪ್ರಭುಗ್ರಾಫಿಕ್ಸ ಒಡೆಯರಿಗೂ ವಂದನೆಗಳು.



# ಪರಿವಿಡಿ

ಕರ್ನಾಟಕ : ಶುದ್ಧಶೈವ ಮತ್ತು ಗೋಳಕಿಮಠ ಸಂಪ್ರದಾಯ
- ಡಾ. ಎಂ.ಎಂ. ಕಲಬುರ್ಗಿ

ತಮಿಳುನಾಡಿನಲ್ಲಿ ಶೈವಧರ್ಮದ ಗೋಳಕಿಪಂಥ
- ಡಾ. ಸಿ.ಆರ್. ಯರವಿನತೆಲಿಮಠ

ಆಂಧ್ರಪ್ರದೇಶದ ಗೋಳಕಿಮಠ ಶಾಸನಗಳು : ಒಂದು ಅಧ್ಯಯನ
- ಪ್ರೊ. ಸದಾನಂದ ಕನವಳ್ಳಿ

# ಕರ್ನಾಟಕ : ಶುದ್ಧಶೈವ ಮತ್ತು ಗೋಳಕಿಮಠ ಸಂಪ್ರದಾಯ

ಎಂ.ಎಂ. ಕಲಬುರ್ಗಿ

ಪ್ರಾಚೀನ ಕರ್ನಾಟಕದಲ್ಲಿ ಹರಡಿಕೊಂಡಿದ್ದ ಶೈವಪಂಥಗಳ ಸಂಖ್ಯೆ ಸ್ವರೂಪಗಳ ಚಿತ್ರ ನಮಗೆ ಇನ್ನೂ ಸ್ಪಷ್ಟವಾಗಿಲ್ಲ. ಇದರ ಸ್ಪಷ್ಟನೆಗಾಗಿ ಕೆಲವು ವಿದ್ವಾಂಸರು ಪ್ರಯತ್ನಿಸಿದ್ದರೂ, ಅವರು ಶಾಸನ ಅವಶೇಷ ಸಾಹಿತ್ಯ ಶಾಸ್ತ್ರ ಇತ್ಯಾದಿ ಆಕರಗಳನ್ನು ಸಮಗ್ರವಾಗಿ ಬಳಸಿಕೊಂಡಿಲ್ಲ. ಕೆಲವೊಮ್ಮೆ ಬಳಸಿಕೊಂಡಿದ್ದರೂ ಅವಸರದ ನಿರ್ಣಯ ನೀಡಿ, ಇಲ್ಲವೆ ಹಿರಿಯ ತಲೆಮಾರಿನವರ ನಿರ್ಣಯಗಳನ್ನೇ ಮತ್ತೆ ಮತ್ತೆ ಉಚ್ಚರಿಸಿ-ಉದ್ಧರಿಸಿ ದಾಟಿದ್ದಾರೆ. ಹೀಗಾಗಿ ಈ ವಿಷಯದ ಬಗ್ಗೆ ಇನ್ನೂ ಗೊಂದಲ ಉಳಿದುಕೊಂಡಿದೆ.

ಪ್ರಾಚೀನ ಶೈವಪಂಥಗಳೆಂದಾಕ್ಷಣ ಶಾಸನಾಭ್ಯಾಸಿಗಳು ನಕುಲೀಶ, ಪಾಶುಪತ, ಕಾಳಾಮುಖ ಇತ್ಯಾದಿಯಾಗಿ ಕಣ್ಣುಮುಚ್ಚಿ ನಾಮಾವಳಿಯಂತೆ ಉಚ್ಚರಿಸಿ ಬಿಡುತ್ತಾರೆ. ಇವು ಸ್ವತಂತ್ರ ಪಂಥಗಳೇ? ನಕುಲೀಶ, ಕಾಳಾಮುಖ ಪರ್ಯಾಯನಾಮಗಳೇ? ಇವುಗಳ ಜೊತೆಗೆ ಹೇಳಬಹುದಾದ ಬೇರೆ ಪಂಥಗಳಿವೆಯೇ? ಇವುಗಳ ನಿರ್ದಿಷ್ಟ ಸಂಖ್ಯೆ ಎಷ್ಟು? ಇತ್ಯಾದಿಗಳನ್ನು ಚರ್ಚಿಸುವ ಗೋಜಿಗೆ ಯಾರೂ ಹೋಗಿಲ್ಲ. ಹೀಗಾಗಿ ಶೈವಶಾಖೆಗಳ ಸಂಖ್ಯಾನಿರ್ಣಯದ ಪ್ರಶ್ನೆಯನ್ನು ಇಲ್ಲಿ ಮೊದಲು ಸಮಗ್ರವಾಗಿ ಎತ್ತಿಕೊಳ್ಳಬಹುದಾಗಿದೆ.

**ಶೈವಶಾಖೆಗಳೆಷ್ಟು?:**

ಧಾರ್ಮಿಕ ಕ್ಷೇತ್ರದಲ್ಲಿ ಧರ್ಮ ಮತ್ತು ಪಂಥಗಳೆಂಬ ಕವಲುಗಳು ಬೆಳೆದು ಬರುತ್ತಿದ್ದು, ಇವುಗಳಲ್ಲಿ ಧರ್ಮಗಳು ನಿರ್ದಿಷ್ಟ ಶಾಸ್ತ್ರಸಾಹಿತ್ಯದ ನಿರ್ದೇಶನದಲ್ಲಿ, ಪಂಥಗಳು ರೂಢಿಗತ ಸಂಪ್ರದಾಯದ ನಿರ್ದೇಶನದಲ್ಲಿ ವ್ಯವಹರಿಸುತ್ತವೆ. ಈ ತಿಳಿವಳಿಕೆಯ ಹಿನ್ನೆಲೆಯಲ್ಲಿ ಬಸವಪೂರ್ವದ ಒಟ್ಟು ಶೈವ ಸಮುದಾಯವನ್ನು (೧) ವೇದನಿಷ್ಠ ಶೈವಧರ್ಮ (೨) (ವೇದ+) ಆಗಮನಿಷ್ಠ ಶೈವಧರ್ಮ (೩) ಶೈವಪಂಥಗಳು ಎಂದು ವರ್ಗೀಕರಿಸಬಹುದು. ಇವುಗಳಲ್ಲಿ ಮೊದಲನೆಯದಾದ ವೇದನಿಷ್ಠ ಶೈವ 'ಧರ್ಮ'ವು ಶಂಕರನ ಅದ್ವೈತವಾಗಿದ್ದು, ಮೂರನೆಯದಾದ 'ಶೈವಪಂಥ'ಗಳಲ್ಲಿ ನಾಥ ಮೊದಲಾದುವು ಪರಿಗಣಿತವಾಗುತ್ತವೆ. ಎರಡನೆಯದಾದ (ವೇದ+) ಆಗಮನಿಷ್ಠ ಶೈವಧರ್ಮದಲ್ಲಿ ಪಾಶುಪತ, ನಕುಲೀಶ ಮೊದಲಾದುವು ಸಮಾವೇಶಗೊಳ್ಳುತ್ತವೆ. ಈ (ವೇದ+)ಆಗಮನಿಷ್ಠ ಶೈವವನ್ನು ಆಗಮ ಮತ್ತು ಶಾಸ್ತ್ರಗ್ರಂಥಗಳು ತಮ ತಮಗೆ ತಿಳಿದಂತೆ

ವರ್ಗೀಕರಿಸಿ, ಹೆಸರಿಸಿ, ಇವುಗಳ ಸಂಖ್ಯೆ, ಹೆಸರುಗಳಲ್ಲಿ ಗೊಂದಲ ನಿರ್ಮಿಸಿವೆ. ಚಂದ್ರಜ್ಞಾನಾಗಮದಲ್ಲಿ ಪಾರ್ವತಿಯು ಈ ಗೊಂದಲದ ಬಗ್ಗೆ ಶಿವನಿಗೆ ಹೀಗೆ ಕೇಳುತ್ತಾಳೆ.

ಆಗಮೇಷು ನಿಗದ್ಯಂತೇ ಶೈವಭೇದಾಸ್ತ್ವನೇಕಧಾ
ಚತ್ವಾರಃ ಕ್ವಚಿದುಚ್ಯಂತೇ ತಥಾ ಸಪ್ತೇತಿ ಹಿ ಕ್ವಚಿತ್||
ದಶೇತಿ ಚ ಕ್ವಚಿತ್ ಪ್ರೋಕ್ತಾಃ ಕಥ್ಯಂತೇ ಕ್ವಚಿದನ್ಯಥಾ
ಸಂಗೃಹ್ಯ ತಾನಿಹ ಬ್ರೂಹಿ ಪರಿಷ್ಕಾರಮಸಂಶಯಮ್|| (೧೦-೨&೩)

("ಆಗಮಗಳಲ್ಲಿ ಶೈವಭೇದಗಳನ್ನು ನಾನಾ ಪ್ರಕಾರವಾಗಿ ಹೇಳುತ್ತಾರೆ. ಕೆಲವೆಡೆ ನಾಲ್ಕೊಂದೂ ಹೇಳುತ್ತಾರೆ. ಮತ್ತೆ ಏಳೆಂದೂ, ಕೆಲವೆಡೆ ಹತ್ತೆಂದೂ ಹೇಳುತ್ತಾರೆ. ಮತ್ತೆ ಕೆಲವೆಡೆ ಬೇರೆ ರೀತಿಯಲ್ಲಿ ಹೇಳುತ್ತಾರೆ. ಅವುಗಳನ್ನು ಸಂಗ್ರಹಿಸಿ ನಿರ್ಣಯಾತ್ಮಕ ವಿಚಾರವನ್ನು ಸಂಶಯವಿರದಂತೆ ನಿರೂಪಿಸು"). ಇದು ಪ್ರಾಚೀನ ಕಾಲದಲ್ಲಿಯೇ ತಲೆದೋರಿದ್ದ ಶೈವಶಾಖೆಯ ಸಂಖ್ಯೆಗಳ ಗೊಂದಲವನ್ನು ಎತ್ತಿ ಹೇಳುತ್ತದೆ. ಈ ಗೊಂದಲವನ್ನು ಇನ್ನಷ್ಟು ಬಿಡಿಸಿ ಹೇಳುವುದಾದರೆ "ಸುಪ್ರಭೇದಾಗಮ ಮತ್ತು ವಾತುಲಶುದ್ಧಾಗಮಗಳಲ್ಲಿ ಶೈವಭೇದಗಳನ್ನು ನಾಲ್ಕೆಂದು ಹೇಳಿದ್ದಾರೆ. (ಸುಪ್ರಭೇದಾಗಮ ೭ನೆಯ ಪ್ರಕರಣ, ವಾತುಲಶುದ್ಧಾಗಮ ೧೦ನೆಯ ಪಟಲ).

ಸೂಕ್ಷ್ಮಾಗಮದಲ್ಲಿ ಮೊದಲು ಸಪ್ತಶೈವಗಳನ್ನು ಹೇಳಿದೆ (೭-೪ ರಿಂದ ೧೪). ಅನಂತರ ಆಚಾರಭೇದದಿಂದ ನಾಲ್ಕೆಂದು ಹೇಳಲಾಗಿದೆ (೭-೧೫ರಿಂದ ೧೬). ಇಲ್ಲಿ ವೀರಶೈವವು ಮೊದಲಿನ ಗುಂಪಿನಲ್ಲಿ ಇಲ್ಲ, ಎರಡನೆಯ ಗುಂಪಿನಲ್ಲಿದೆ.

ಪಾರಮೇಶ್ವರಾಗಮದಲ್ಲಿ ಏಳು ಶೈವಪ್ರಭೇದಗಳನ್ನು ಹೇಳಿದೆ (೧-೧೬ ರಿಂದ ೧೭). ಇಲ್ಲಿ ವೀರಶೈವವು ಸಪ್ತಶೈವಗಳಲ್ಲಿ ಮೊದಲಿನದಾಗಿ ಬಂದಿದೆ.

ವೀರಾಗಮದಲ್ಲಿ (ಶೈವ ಪಟಲ) ಇಪ್ಪತ್ತೆಂಟು ಶೈವಭೇದಗಳನ್ನು ಹೇಳಲಾಗಿದೆ. ಹತ್ತೆಂದು ಹೇಳಿದ ವಿಚಾರ ಗಮನಕ್ಕಿನ್ನೂ ಬಂದಿಲ್ಲ. ಪ್ರಸ್ತುತ ಆಗಮ (ಚಂದ್ರಜ್ಞಾನಾಗಮ) ದಲ್ಲಿ ವೀರಶೈವವನ್ನು ಸೇರಿಸಿ ಎಂಟು ಶೈವಭೇದಗಳು ಬಂದಿವೆ."*

ಇದೆಲ್ಲವನ್ನು ಸಮೀಕರಿಸಿ ಜಾತಿಭೇದದಿಂದ ಶೈವಗಳು ಏಳು, ಆಚಾರಭೇದದಿಂದ ಶೈವಗಳು ನಾಲ್ಕು ಎಂದು ನಾವು ಒಪ್ಪಿಕೊಳ್ಳಬಹುದಾಗಿದೆ (ಸೂಕ್ಷ್ಮಾಗಮ ೭-೧೫). ಇವುಗಳಲ್ಲಿ ಆಚಾರಭೇದದ ವರ್ಗೀಕರಣವೇ ವೈಜ್ಞಾನಿಕವಾಗಿದ್ದು, ಈ ವಿಷಯವನ್ನು ಪ್ರೊ. ಡೆವಿಡ್ ಲೊರೆಂಝೆನ್ ತಮ್ಮ "The Kapalikas and Kalamukhas: Two lost Saivite sects" ಗ್ರಂಥದಲ್ಲಿ ಚರ್ಚೆಗೆ ಎತ್ತಿಕೊಂಡು, ಭಾಸ್ಕರಾಚಾರ್ಯರ ಬ್ರಹ್ಮಸೂತ್ರಭಾಷ್ಯ, ವಾಚಸ್ಪತಿಮಿಶ್ರನ ಭಾಮತೀ, ಯಾಮುನಾಚಾರ್ಯನ ಆಗಮಪ್ರಮಾಣ, ರಾಮಾನುಜರ

---

* ಡಾ. ಎಂ. ಶಿವಕುಮಾರಸ್ವಾಮಿ-ಚಂದ್ರಜ್ಞಾನಾಗಮ (೨೦೦೨) ಪು. ೧೩೪-೧೩೫.

ಶ್ರೀಭಾಷ್ಯ, ಕೂರ್ಮಪುರಾಣ, ನಾರದೀಯ ಪುರಾಣ, ಶಿವಪುರಾಣದ ವಾಯುವೀಯ ಸಂಹಿತೆ, ಸ್ಕಂದಪುರಾಣ, ಸ್ಕಂದಪುರಾಣದ ಸೂತಸಂಹಿತೆ, ಸ್ವಯಂಭುಪುರಾಣ, ವಾಮನಪುರಾಣ, ವಾಶಿಷ್ಠ ಮತ್ತು ಲಿಂಗಪುರಾಣ, ಆನಂದಗಿರಿಯ ಶಂಕರವಿಜಯ, ರಾಜಶೇಖರನ ಷಡ್ದರ್ಶನ ಸಮುಚ್ಚಯ, ಶಕ್ತಿಸಂಗಮ ತಂತ್ರ, ಸಿದ್ಧಸಿದ್ಧಾಂತ ಪದ್ಧತಿ, ಸುಪ್ರಭೇದಾಗಮ, ಮಲ್ಕಾಪುರಂ ಶಾಸನಗಳನ್ನಾಧರಿಸಿ ಇವುಗಳ ಸಂಖ್ಯೆ ನಾಲ್ಕು ಎಂದು ಸ್ಪಷ್ಟಪಡಿಸಿದ್ದಾರೆ.

ಇವರು ಸಿರಸಂಗಿ (೧೧೪೮) ಮತ್ತು ನೇಸರಗಿ (೧೨೧೯) ಶಾಸನಗಳಲ್ಲಿ ಕಂಡುಬರುವ ಪುನರುಕ್ತ ಕಂದಪದ್ಯದಲ್ಲಿಯೂ ಇದೇ ನಾಲ್ಕುಶೈವಗಳ ಉಲ್ಲೇಖವಿರುವುದನ್ನು ಸೂಚಿಸಿದ್ದು, ಆ ಪದ್ಯ ಹೀಗಿದೆ:

ನೆಗರ್ದ್ದ ಮಹಾವ್ರತಿಗಳೊಳಂ
ನೆಗರ್ದ್ದ ಮಹಾಪಾಸುಪತದೊಳ್ ಸ್ರೋತ್ರೀಯದೊಳಂ।
ನೆಗರ್ದ್ದುದಗಣಿತಮೆನಲ್ಕೆ
ನೆಗರ್ದ್ದ ಕಾಳಾಮುಖ ಸುಧರ್ಮಂ ಪ್ರಮುಖಂ॥

ಇಲ್ಲಿ ಮಹಾವ್ರತಿ, ಪಾಶುಪತ, ಶ್ರೋತ್ರೀಯ, ಕಾಳಾಮುಖವೆಂಬ ಶಾಖೆಗಳನ್ನು ಸೂಚಿಸಲಾಗಿದೆ. ಇವುಗಳಲ್ಲಿ ಶ್ರೋತ್ರೀಯ (ಶ್ರುತಿ=ವೇದ)ವು ಹೆಚ್ಚು ವೇದನಿಷ್ಠವಾಗಿರಬಹುದು. ಇದಲ್ಲದೆ ಸಗರ ಶಾಸನ(೧೦೭೧)ದಲ್ಲಿ ಅನಂತಶಕ್ತಿಯತಿಯನ್ನು ಕುರಿತು ಹೇಳಲಾದ "ಕಾಳಾಮುಖ, ಮಹಾವ್ರತ, ಪಾಶುಪತ, ಶಿವಸಮಯ ಸಮಾನ ಪಕ್ಷಪಾತರ್"* ಎಂಬ ವಾಕ್ಯ ಇತ್ತೀಚೆ ನನ್ನ ಗಮನಕ್ಕೆ ಬಂದಿದ್ದು, ಇಲ್ಲಿ ಶ್ರೋತ್ರೀಯಕ್ಕೆ ಪರ್ಯಾಯವಾಗಿ ಶಿವಸಮಯವೆಂಬುದನ್ನು ಬಳಸಿ, ಅವೇ ನಾಲ್ಕು ಶೈವಗಳನ್ನು ಸೂಚಿಸಲಾಗಿದೆ. ಇಲ್ಲಿಯ "ಸಮಾನ ಪಕ್ಷಪಾತರ್" ಎಂಬುದು ಇವುಗಳಲ್ಲಿ ಅಷ್ಟಾಗಿ ವ್ಯತ್ಯಾಸವಿಲ್ಲವೆಂಬುದನ್ನು, ಬಹುಶಃ ಇವು ಒಂದೇ ಮೂಲದ ಶಾಖೆಗಳೆಂಬುದನ್ನು ಸೂಚಿಸುತ್ತದೆ. ಅದೇನೇ ಇರಲಿ, ಈ ನಾಲ್ಕೂ ಶೈವಗಳನ್ನು ಚೆನ್ನಬಸವಣ್ಣನವರು "ಶೈವ (=ಶಿವಸಮಯಿ) ಸೈವೆರಗಾದ, ಪಾಶುಪತಿ ಪಥವನರಿಯ, ಕಾಳಾಮುಖಿ ಕಂಗೆಟ್ಟ, ಮಹಾವ್ರತಿ ಮದವೇರಿದ...." ಎಂದು ನಿಂದಿಸುವುದರಿಂದ, ಶರಣರು ಇವುಗಳನ್ನು ನಿರಾಕರಿಸಿ, ಹೊಸ 'ಲಿಂಗಾಯತ' ಧರ್ಮವನ್ನು ಸ್ಥಾಪಿಸಿದರೆಂದು ಹೇಳಬೇಕಾಗುತ್ತದೆ.

**ಶೈವಶಾಖೆಗಳ ಅಭ್ಯಾಸ:**

ಈ ನಾಲ್ಕು ಶೈವಗಳಲ್ಲಿ ಕರ್ನಾಟಕದ ಶಾಸನಗಳು ನಕುಲೀಶ, ಪಾಶುಪತಗಳನ್ನು ತುಂಬ ವಿಪುಲವಾಗಿ, ಮಹಾವ್ರತಿ (ಕಾಪಾಲಿಕ), ಶ್ರೋತ್ರೀಯ(ಶಿವಸಮಯ)ಶೈವಗಳನ್ನು

---

* ಕಲಬುರ್ಗಿ ಜಿಲ್ಲೆಯ ಶಾಸನಗಳು (ಹನುಮಾಕ್ಷಿ ಗೋಗಿ) ಪು. ೪೩೨.

ವಿರಳವಾಗಿ ದಾಖಲಿಸಿವೆ. ಈ ಶಾಸನ ಆಕರಗಳನ್ನ ಆಧರಿಸಿ ಡಾ. ಲೊರೆಂಜಿನ್ ಅವರು ತಮ್ಮ "Kapalikas and Kalamukha's : Two lost Saivite sects" ಎಂಬ ಗ್ರಂಥದಲ್ಲಿ ಒಂದು ದೊಡ್ಡ ತಪ್ಪು ಮಾಡಿದ್ದಾರೆ. ಅದು: ನಕುಲೀಶರಲ್ಲಿ ದೀಕ್ಷೆ ಪಡೆದವರೇ ಕಾಳಾಮುಖರು. ಹೀಗೆ ನಕುಲೀಶದ ಒಂದು ಭಾಗವಾಗಿರುವ ಕಾಳಾಮುಖವನ್ನೇ ಮುಖ್ಯ ಹೆಸರಾಗಿ ಗ್ರಹಿಸಿ, ಅದನ್ನು ಗ್ರಂಥಶೀರ್ಷಿಕೆಗೆ ಬಳಸಿದ್ದಾರೆ. ಇದು ಸಾಲದೆಂಬಂತೆ ಶೀರ್ಷಿಕೆಯಲ್ಲಿ "Two lost Saivite sects" ಎಂದು ಹೇಳಿ, ಒಳಗೆ ಕಾಪಾಲಿಕ, ಕಾಳಾಮುಖ (ಶಕ್ತಿಪರ್ಷೆ), ಕಾಳಾಮುಖ (ಸಿಂಹಪರ್ಷೆ) ಎಂದು ಬಿಡಿಸಿಕೊಂಡು ಮೂರು ಶಾಖೆ (Sect)ಗಳ ಬಗ್ಗೆ ಬರೆದಿದ್ದಾರೆ. ಹೆಚ್ಚಿನದಾಗಿ ಕಾಳಾಮುಖ (ಸಿಂಹಪರ್ಷೆ) ಎನ್ನುತ್ತ ಕಾಳಾಮುಖಕ್ಕೂ ಸಿಂಹಪರ್ಷೆಗೂ ಇಲ್ಲದ ಸಂಬಂಧ ಕಲ್ಪಿಸಿದ್ದಾರೆ. ನಿಜ ಹೇಳುವುದಾದರೆ, ಇವರು ಇವುಗಳನ್ನು ಕಾಪಾಲಿಕ, ನಕುಲೀಶ(ಶಕ್ತಿಪರ್ಷೆ), ಪಾಶುಪತ (ಸಿಂಹಪರ್ಷೆ) ಎಂದು ಕರೆದು, ಶೀರ್ಷಿಕೆಯಲ್ಲಿ ಕೇವಲ "Three lost saivite sects" ಎಂಬುದನ್ನು ಬಳಸಿದ್ದರೆ, ಗ್ರಂಥದ ಒಳಗಿನ ವಿಷಯಕ್ಕೂ ಹೊರಗಿನ ಶೀರ್ಷಿಕೆಗೂ ಹೊಂದಿಕೆಯಾಗುತ್ತಿತ್ತು. ಅದೇನೇ ಇರಲಿ, ಡಾ. ಲೊರೆಂಝಿನ್ ಅವರು ಶೀರ್ಷಿಕೆಯಲ್ಲಿ ಎರಡು ಶಾಖೆಯೆಂದು ಹೇಳಿ, ಒಳಗೆ ಮೂರು ಶಾಖೆಗಳ ಅಭ್ಯಾಸ ನಡೆಸಿ, ನಾಲ್ಕನೆಯದಾದ ಶ್ರೋತ್ರೀಯ (ಶಿವಸಮಯ) ಶೈವದ ಅಭ್ಯಾಸವನ್ನು ಕೈಬಿಟ್ಟಿದ್ದಾರೆ.

ಶ್ರೀ ಕಪಟ್ರಾಳ ಕೃಷ್ಣರಾಯರು 'ಕರ್ನಾಟಕದ ಲಾಕುಳಶೈವರ ಇತಿಹಾಸ" ಎಂಬ ಕೃತಿಯಲ್ಲಿ (ಪು. ೬೩-೬೭) ಮೇಲೆ ಹೇಳಿದ ನಾಲ್ಕು ಶೈವಗಳನ್ನು ಆನುಷಂಗಿಕವಾಗಿ ಗುರುತಿಸಿ, ಇವುಗಳಲ್ಲಿ ಶ್ರೋತ್ರೀಯ ಶೈವವೆಂಬುದು ಇಂದಿನ ವೈದಿಕ ಬ್ರಾಹ್ಮಣ್ಯದಿಂದ ಭಿನ್ನವಾದ ಸ್ವತಂತ್ರ ಶಾಖೆಯೆಂದು ಸರಿಯಾಗಿ ಹೇಳಿರುವರಾದರೂ, ಸಹಜವಾಗಿಯೇ ತಮ್ಮ ಗ್ರಂಥದ ವಿಷಯವಾದ ಲಾಕುಳಶೈವದ (ನಕುಲೀಶ, ಕಾಳಾಮುಖ) ಬಗ್ಗೆ ಉದ್ದಕ್ಕೂ ಚರ್ಚಿಸಿದ್ದಾರೆ. ಮಿಕ್ಕವುಗಳಲ್ಲಿ ಪಾಶುಪತದ ಬಗ್ಗೆ ಸ್ವಲ್ಪ ಚರ್ಚಿಸಿ, ಕಾಪಾಲಿಕ, ಶ್ರೋತ್ರೀಯ (ಶಿವಸಮಯ) ಶೈವಗಳನ್ನು ತಮ್ಮ ಗ್ರಂಥದ ವಿಷಯವಲ್ಲವಾಗಿ ಕೈಬಿಟ್ಟಿದ್ದಾರೆ.

ಡಾ. ಚಿದಾನಂದಮೂರ್ತಿಯವರು ತಮ್ಮ "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಕೃತಿಯ 'ಶೈವಧರ್ಮದ ಶಾಖೆಗಳು' ಎಂಬ ಉಪಶೀರ್ಷಿಕೆಯಲ್ಲಿ ಮೇಲೆ ಹೇಳಿದ ನಾಲ್ಕು ಶೈವಗಳನ್ನು ಆನುಷಂಗಿಕವಾಗಿ ಸೂಚಿಸಿರುವರಾದರೂ, ಇವರ ಗಮನವೂ ನಕುಲೀಶ, ಪಾಶುಪತಗಳ ಮೇಲೆಯೇ ಕೇಂದ್ರೀಕೃತಗೊಂಡಿದೆ. ಶ್ರೋತ್ರೀಯ (ಶಿವಸಮಯ) ಶೈವವೆಂಬುದು ಒಂದು ಸ್ವತಂತ್ರಪಂಥವೆಂಬ ಸಂಗತಿಯನ್ನು ಗುರುತಿಸುವ, ಶಾಸನಗಳ ಸಹಾಯದಿಂದ ಅದನ್ನು ಕುರಿತು ವಿವೇಚಿಸುವ ಗೋಜಿಗೆ ಇವರೂ ಹೋಗಿಲ್ಲ.

ಡಾ. ಎಸ್.ಸಿ. ನಂದಿಮಠ ಅವರು ತಮ್ಮ "ಕರ್ನಾಟಕದ ಧರ್ಮಗಳು" ಗ್ರಂಥದಲ್ಲಿ ಈ ಶ್ರೋತ್ರೀಯ (ಶಿವಸಮಯ) ಶೈವವನ್ನು ಕುರಿತು ವಿವರಣೆ ನೀಡಿ, ಮಲ್ಕಾಪುರ ಶಾಸನ, ಕುರುಬೆಟ್ಟ ಶಾಸನ(ಶಿವಾನುಭವ ೭-೬)ಗಳಲ್ಲಿ ಪ್ರಸ್ತಾಪವಾಗಿರುವುದನ್ನು ತಿಳಿಸಿದ್ದರೂ, ಇದು

ನಕುಲೀಶ, ಪಾಶುಪತ, ಕಾಪಾಲಿಕಗಳ ಜೊತೆಯ ನಾಲ್ಕನೆಯ ಮುಖ್ಯಧರ್ಮವೆಂದು ಅವರೂ ಗುರುತಿಸಿಲ್ಲ.

ಹೀಗೆ ಕರ್ನಾಟಕದ ಶೈವ ಅಭ್ಯಾಸಿಗಳಿಂದ ಉಪೇಕ್ಷಿತವಾಗಿರುವ ಶ್ರೋತ್ರೀಯ (ಶಿವಸಮಯ) ಶೈವದ ಇನ್ನೊಂದು ಹೆಸರು ಶುದ್ಧಶೈವವೆಂದು ಆಂಧ್ರದ ಮಲ್ಕಾಪುರಂ, ಕರ್ನಾಟಕದ ಸವದತ್ತಿ ಶಾಸನಗಳು ತಿಳಿಸುತ್ತಿದ್ದು, ಈ ಲೇಖನದಲ್ಲಿ ಇನ್ನು ಮುಂದೆ ಆ ಹೆಸರನ್ನೇ ಬಳಸಲಾಗುತ್ತಿದೆ.

**ಶುದ್ಧಶೈವದ ಉಗಮ ಕಾಶ್ಮೀರ:**

ಮೇಲೆ ಹೇಳಿದಂತೆ ಡಾ. ನಂದಿಮಠರು ಈ ಶುದ್ಧಶೈವದ ಬಗ್ಗೆ ವಿಸ್ತಾರವಾಗಿ ಬರೆದಿದ್ದಾರೆ. ಅವರ ಪ್ರಕಾರ, ಕಾಶ್ಮೀರದಲ್ಲಿ ಉಗಮವಾದ ಇದರ ಬಗ್ಗೆ ಸಿದ್ಧಸೋಮಾನಂದನ (೧೧ನೆಯ ಶತಮಾನ) ಶಿವದೃಷ್ಟಿ ವೃತ್ತಿ ಮತ್ತು ತಂತ್ರಾಲೋಕಟೀಕೆಗಳಲ್ಲಿ ಬರುವ ವಿಷಯ ಹೀಗಿದೆ:

ಮೊದಲು ಋಷಿಮುಖದಲ್ಲಿದ್ದ ಈ ಧರ್ಮದ ತತ್ವಗಳು ಕಲಿಯುಗದಲ್ಲಿ ವಿಚ್ಛಿನ್ನವಾಗಲು, ಕೈಲಾಸದಲ್ಲಿ ಶ್ರೀಕಂಠ ರೂಪದಿಂದ ಸಂಚರಿಸುತ್ತಲಿದ್ದ ಶಿವನು, ಶಾಸ್ತ್ರೋಪನಿಷತ್ತುಗಳ ಸಾರಭೂತವಾದ ತ್ರಿಕಮತ(ಕಾಶ್ಮೀರಶೈವ, ಪ್ರತ್ಯಭಿಜ್ಞ)ವನ್ನು ಪ್ರಚಾರಮಾಡಲು ದೂರ್ವಾಸಮುನಿಗೆ ಆಜ್ಞಾಪಿಸಿದನು. ಅವನು ಆಮರ್ದಕ, ಶ್ರೀನಾಥ, ತ್ರ್ಯಂಬಕ ಹೆಸರಿನ ಮೂವರು ಮಾನಸಪುತ್ರರನ್ನು ಸೃಷ್ಟಿಸಿ, ಅವರಿಗೆ ದ್ವಯ, ದ್ವಯಾದ್ವಯ, ಅದ್ವಯ ಮತಗಳ ಪ್ರಸಾರ ಮಾಡಲು ಹೇಳಿದನು. ಇವುಗಳಲ್ಲಿ ಅದ್ವಯ ರೂಪದ ತ್ರ್ಯಂಬಕನ ಸಂಪ್ರದಾಯವೇ ತ್ರಿಕಮತವೆಂದು ಪ್ರಸಿದ್ಧಿ ಪಡೆದಿದೆ. ಈ ಮತವು ಕರ್ನಾಟಕದಲ್ಲಿ ಪ್ರಸಾರಗೊಂಡಿದ್ದಿತೆಂಬುದಕ್ಕೆ ಗೋಕಾಕ ತಾಲೂಕಿನ ಕುರುಬೆಟ್ಟ (೧೨೪೫) ಮೊದಲಾದ ಶಾಸನಗಳು ನೇರ ಸಾಕ್ಷಿಯಾಗಿವೆ. ಕುರುಬೆಟ್ಟ ಶಾಸನದ

ಶ್ರೀ ಕೈಲಾಸವಾಸಿನಃ ಪಶುಪತೇ ಶಿಷ್ಯೇಣ ದೂರ್ವಾಸ ಸಾ
ಮೇದಿನ್ಯಾಮವತಾರಿತೇತಿ ವಿಮಳಃ ಶೈವಾನ್ವಯೇ ದೇಶಿಕಃ||

(ಕೈಲಾಸ ನಿವಾಸಿಯಾದ ಪಶುಪತಿಯ ಶಿಷ್ಯನಾದ ದೂರ್ವಾಸನಿಂದ ಭೂಮಿಯಲ್ಲಿ ಸ್ಥಾಪಿಸಲ್ಪಟ್ಟ ಶೈವಾನ್ವಯದಲ್ಲಿ ವಿಮಳದೇಶಿಕನೆಂಬವನು ಹುಟ್ಟಿದನು) ಎಂಬ ಹೇಳಿಕೆ ಈ ವಿಷಯವಾಗಿ ನಮ್ಮ ಗಮನ ಸೆಳೆಯುತ್ತದೆ. ಒಟ್ಟಾರೆ, ಕರ್ನಾಟಕದಲ್ಲಿ ಹರಡಿದ್ದ ಈ ಶುದ್ಧ ಶೈವಮತವು ಕಾಶ್ಮೀರದ ತ್ರಿಕಸಿದ್ಧಾಂತ (ಪಶು, ಪಾಶ, ಪತಿ ಸಿದ್ಧಾಂತ)ವೇ ಆಗಿದೆ.

**ಶುದ್ಧಶೈವದ ಪರ್ಯಾಯ ನಾಮಗಳು:**

ಈ ವರೆಗೆ ವಿವೇಚಿಸಿದ ಶೈವಕ್ಕೆ ಶ್ರೋತ್ರೀಯ, ಶಿವಸಮಯ ಎಂಬ

ಪರ್ಯಾಯನಾಮಗಳಿರುವುದನ್ನು ಶಾಸನಗಳ ಸಹಾಯದಿಂದ ಮೇಲೆ ತಿಳಿಸಲಾಗಿದೆ. ಆರಂಭದಲ್ಲಿ ಸೂಚಿಸಿದ ಬ್ರಹ್ಮಸೂತ್ರಭಾಷ್ಯ, ಭಾಮತೀ ಇತ್ಯಾದಿ ಗ್ರಂಥಗಳಲ್ಲಿ ಈ ಶ್ರೋತ್ರೀಯ (ಶಿವಸಮಯ) ಶೈವಕ್ಕೆ ಸಿದ್ಧಾಂತ ಹೆಸರನ್ನು ಬಳಸಲಾಗಿದೆ. ಸಿದ್ಧಾಂತ ಶಿಖಾಮಣಿಯು "ಶೈವಂ ಪಾಶುಪತಂ ಸೋಮಂ ಲಾಕುಲಂ ಚೇತಿ ಭೇದತಃ" (೫-೯) ಎನ್ನುತ್ತ ಈ ನಾಲ್ಕನ್ನೇ ಹೇಳುವುದಾದರೂ, ಮುಂದುವರಿದು ಇಲ್ಲಿಯ ಶೈವದಲ್ಲಿ ಸಿದ್ಧಾಂತವು ಒಂದು ಪ್ರಭೇದವೆಂದು ಸೂಚಿಸಿದೆ. ಅದೇನೇ ಇದ್ದರೂ ಶೈವ ಮತ್ತು ಸಿದ್ಧಾಂತ ಒಂದೇ ಎಂಬ ಧ್ವನಿ ಇಲ್ಲಿದೆ. ಮುಂದುವರಿದು ಸಿದ್ಧಾಂತವು "ವೇದಸಂಮತ ಉಚ್ಯತೇ" (೫-೧೨) ಎಂದು ಹೇಳುತ್ತಿರುವುದರಿಂದ, ಇದು ಸಿರಸಂಗಿ ಶಾಸನೋಕ್ತ ಶ್ರೋತ್ರೀಯ(ಶ್ರುತಿ=ವೇದ)ವೇ ಆಗಿದೆಯೆಂದು ಖಚಿತವಾಗುತ್ತದೆ.

ಆಂಧ್ರಪ್ರದೇಶದ ಮಲ್ಕಾಪುರ ಶಾಸನದಲ್ಲಿ "ದೂರ್ವಾಸಾನ್ವಯ"ದ ಉಲ್ಲೇಖದೊಂದಿಗೆ ಇಲ್ಲಿಯೇ "ಶುದ್ಧಶೈವ ಮಠಾಯ ಎಂಬ ಉಲ್ಲೇಖವೂ ಇರುವುದರಿಂದ, ಈ ದೂರ್ವಾಸಾನ್ವಯದ ಇನ್ನೊಂದು ಹೆಸರು ಶುದ್ಧಶೈವವೆಂದು ವ್ಯಕ್ತವಾಗುತ್ತದೆ. ಈ ಬಗ್ಗೆ ನಮ್ಮ ಗಮನಕ್ಕೆ ಬಂದ ಇನ್ನೊಂದು ಆಧಾರ ೧೨೬೮ರ ಸವದತ್ತಿ ಶಾಸನ. ಇಲ್ಲಿ ಕೋಲಾರದ ಕೀರ್ತಿರಾಜನು ಸವದತ್ತಿಯ ನಾಗರಕೆರೆಯಲ್ಲಿ ಕಟ್ಟಿಸಿದ ಮಲ್ಲಿಕಾರ್ಜುನ ದೇವಾಲಯವನ್ನು ತಾನು "ಆರಾಧಿಸುವ ಶುದ್ಧಶೈವಮಾರ್ಗಿಗಳಪ್ಪ ... ಲಿಂಗಯಂಗಳಿಗೆ" ಅರ್ಪಿಸಿದನೆಂದು ಹೇಳಲಾಗಿದೆ. ಇಲ್ಲಿಯೇ ಈ ಲಿಂಗಯನು "ದೂರ್ವಾಸಾನ್ವಯ"ದವನೆಂಬ ಸೂಚನೆಯೂ ಇದೆ. ಇದರಿಂದ ದೂರ್ವಾಸ್ವಾನ್ವಯದ ಶೈವವು 'ಶುದ್ಧಶೈವ'ವೆಂದು ಮತ್ತೂ ಸ್ಪಷ್ಟವಾಗುತ್ತದೆ.

ಸಿದ್ಧಾಂತ ಶಿಖಾಮಣಿಗೆ ಅಜ್ಞಾತವ್ಯಕ್ತಿ ಬರೆದ ಟೀಕೆಯಲ್ಲಿ (ಜಿ.ಜಿ.ಮಂಜುನಾಥ ೨೦೦೦) ಮಾಹೇಶ್ವರಾಃ=ಶುದ್ಧಶೈವರು (೫-೨೧) ಎಂದು ಅರ್ಥ ಬರೆದಿರುವುದರಿಂದ ಮಾಹೇಶ್ವರವೆಂಬುದು ಇದರ ಇನ್ನೊಂದು ಹೆಸರಿರಬಹುದಾಗಿದೆ. ಶಾಸನಗಳಿಂದಲೂ ಇದಕ್ಕೆ ಬೆಂಬಲವಿದೆ.

ಶ್ರೀಕಂಠನ ಆದೇಶದಂತೆ ದೂರ್ವಾಸನಿಂದ ಸ್ಥಾಪಿಸಲ್ಪಟ್ಟ ಕಾರಣ, ಈ ಧರ್ಮಕ್ಕೆ 'ಶ್ರೀಕಂಠ' ಶೈವ ಎಂದೂ ಕರೆಯುತ್ತಿರಬಹುದು. ಕೆಳದಿ ಬಸವರಾಜನ ಶಿವತತ್ವರತ್ನಾಕರದಲ್ಲಿ 'ಲಕುಲೀಶೋದಿತಂ ಶೈವಂ ಶ್ರೀ ಕಂಠೋದಿತಮಿತ್ಯಪಿ" (ತರಂಗ ೪-ಶ್ಲೋಕ ೮) ಎಂದು ಹೇಳಲಾಗಿದ್ದು, ಪ್ರವರ್ತಕರ ಹೆಸರಿನಲ್ಲಿ ಲಕುವ(ಶೈವ) ಮತ್ತು ಶ್ರೀಕಂಠ(ಶೈವ)ವೆಂದು ಇವು ಪ್ರಸಿದ್ಧವಾಗಿದ್ದವೆನಿಸುತ್ತದೆ.

ಆಂಧ್ರಪ್ರದೇಶದಲ್ಲಿ ಇದು ಆರಾಧ್ಯಶೈವ ಹೆಸರಿನಿಂದಲೂ ಪ್ರಚಾರದಲ್ಲಿದ್ದಿರಬಹುದಾಗಿದೆ. ದೂರ್ವಾಸಪರಂಪರೆಯ ಸೋಮಶಂಭು ದೇಶಿಕನು ಶುದ್ಧಶೈವ. ಈ ಸೋಮಶಂಭು ಪರಂಪರೆಯ ನೀಲಕಂಠಾಚಾರ್ಯನು (ಆರಾಧ್ಯಚಾರಿತ್ರದ ಕರ್ತೃ) ಆರಾಧ್ಯ ಪರಂಪರೆಯವನೆಂಬುದನ್ನು ನೆನೆದರೆ ಈ ಶುದ್ಧಶೈವದ ಇನ್ನೊಂದು ಹೆಸರು ಆರಾಧ್ಯಶೈವವೆಂದು ಸಹಜ ತಿಳಿದುಬರುತ್ತದೆ. ಇಂದು ಆಂಧ್ರಪ್ರದೇಶದಲ್ಲಿ ಈ ಸಂಪ್ರದಾಯವು

ಆರಾಧ್ಯ (ವೀರ)ಶೈವ ಹೆಸರಿನಿಂದ ದೊಡ್ಡ ಪಂಗಡವಾಗಿ ಬೆಳೆದುದೂ ಈ ಊಹೆಯನ್ನು ಸಮರ್ಥಿಸುತ್ತದೆ. ಇದಲ್ಲದೆ ಶ್ರೀಶೈಲ ಮಲ್ಲಿಕಾರ್ಜುನ ದೇವಾಲಯದ ಪೂಜಾವ್ಯವಸ್ಥೆಯ ಅಧಿಕಾರವನ್ನು "ಅಸಂಖ್ಯಾತ ಮಾಹೇಶ್ವರ"ರು ಪಡೆದುಕೊಂಡರೆಂದು ಇಲ್ಲಿಯ ಶಾಸನ (೧೩೧೨) ತಿಳಿಸುತ್ತದೆ. ಇಲ್ಲಿ 'ಅಸಂಖ್ಯಾತ ಮಾಹೇಶ್ವರ' ಎಂಬಲ್ಲಿಯ ಮಾಹೇಶ್ವರವೆಂಬುದು ಈ ಶ್ರೋತ್ರೀಯ ಶೈವದ ಪರ್ಯಾಯನಾಮವಾಗಿರುವುದನ್ನೂ, ಈ ಕೆಲಸವನ್ನು ಕೈಗೂಡಿಸಿಕೊಟ್ಟವನು ಕಾಕತೀಯ ಅಧಿಕಾರಿ ಆರಾಧ್ಯ ಪ್ರಗಡ(ಆರಾಧ್ಯ ಶಬ್ದ ಗಮನಿಸಿರಿ)ನೆಂಬುದನ್ನೂ, ಈ ಕಾಲದಲ್ಲಿ ಕಾಕತೀಯರ ರಾಜಗುರುತ್ವ ಕಾರಣವಾಗಿ ಈ ಶ್ರೋತ್ರೀಯಶೈವರು ಪ್ರಬಲರಾಗಿದ್ದುದನ್ನೂ ನೋಡಿದರೆ, ಇವರಿಗೆ ಆರಾಧ್ಯಶೈವ ಹೆಸರೂ ಬಳಕೆಯಲ್ಲಿರಬಹುದೆನಿಸುತ್ತದೆ. ಒಟ್ಟಾರೆ, ಈ ಶೈವಶಾಖೆಗೆ ಶ್ರೋತ್ರೀಯಶೈವ, ಶಿವಸಮಯ, ಸಿದ್ಧಾಂತಶೈವ, ಶುದ್ಧಶೈವ, ಮಾಹೇಶ್ವರಶೈವಗಳಲ್ಲದೆ, ಶ್ರೀಕಂಠಶೈವ, ಆರಾಧ್ಯಶೈವವೆಂಬ ಪರ್ಯಾಯನಾಮಗಳಿದ್ದವೆಂದು ಸ್ಪಷ್ಟವಾಗುತ್ತದೆ.

**ಶುದ್ಧಶೈವರು ವೈದಿಕ ಶೈವಬ್ರಾಹ್ಮಣರಲ್ಲ, ಆಗಮಿಕ ಶೈವಬ್ರಾಹ್ಮಣರು:**

ಕರ್ನಾಟಕದಲ್ಲಿ ಶೈವಬ್ರಾಹ್ಮಣ ಎಂದಾಕ್ಷಣ ಶಂಕರನ ವೈದಿಕ ಶೈವ (ಸ್ಮಾರ್ತ) ನೆನಪಾಗುತ್ತದೆ. ಇದು ವೇದನಿಷ್ಠ ಶೈವಬ್ರಾಹ್ಮಣಪಂಗಡ. ಇದೇ ರೀತಿ ಈ ನಾಲ್ಕು, ಅದರಲ್ಲಿಯೂ ಶುದ್ಧಶೈವವು ಆಗಮನಿಷ್ಠ ಶೈವಬ್ರಾಹ್ಮಣವೆಂದು ಪ್ರಸಿದ್ಧಿ ಪಡೆದಿದ್ದಿತು. ಕನ್ನಡ ಸಾಹಿತ್ಯದಲ್ಲಿ ಕೆರೆಯ ಪದ್ಮರಸ, ಹರಿಹರ ಜನ್ನಿವಾರಧಾರಿಗಳೆಂದು ಚಿತ್ರಿತರಾಗಿದ್ದಾರೆ. ಹರಿಹರನನ್ನು "ಶುದ್ಧಶೈವ"ನೆಂದು ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ ಕರೆದಿದೆ. ಜನ್ನಿವಾರಧಾರಿಗಳಾಗಿಯೂ ಇವರು ಬ್ರಾಹ್ಮಣ(ವೈದಿಕ) ನಿಂದೆಮಾಡಿದ ನಿದರ್ಶನಗಳಿವೆ. ರಾಘವಾಂಕನ ತಂದೆ "ಶಿವಬ್ರಾಹ್ಮಣೋತ್ತಮ...... ಮಹಾದೇವಭಟ್ಟ"ನೆಂದು ಸಿದ್ಧನಂಜೇಶನ ರಾಘವಾಂಕ ಚಾರಿತ್ರ್ಯದಲ್ಲಿ ಹೇಳಲಾಗಿದೆ. ಹೀಗಾಗಿ ಇವರು ವೈದಿಕ ಬ್ರಾಹ್ಮಣರಲ್ಲ, ಆಗಮಿಕ ಬ್ರಾಹ್ಮಣರೆನಿಸುತ್ತದೆ. ಈ ಪರಂಪರೆಯವರು ತೀರ ಪ್ರಾಚೀನಕಾಲದಿಂದಲೂ ವೇದದ ಶ್ರೇಷ್ಠತೆಯ ವ್ಯಸನಕ್ಕೆ ಒಳಗಾಗಿ ಆಗಮಪಠ್ಯವನ್ನು ಹೆಚ್ಚು ವೇದಮುಖಿಮಾಡುತ್ತ ಬಂದರು. ಬಳಿಕ ೧೨ನೆಯ ಶತಮಾನದಲ್ಲಿ ಶರಣಧರ್ಮದ ಜನಪ್ರಿಯತೆಗೂ ಮರುಳಾಗಿ, ಅದರ ವಿಚಾರಗಳನ್ನೂ ಆಗಮದಲ್ಲಿ ಬೆರಸುತ್ತ ಬಂದರು. ಇಂದು ಆಗಮದಲ್ಲಿ ವೇದ, ಆಗಮ ಮತ್ತು ವಚನ-ಈ ಮೂರೂ ಸಂಪ್ರದಾಯಗಳ ಭಿನ್ನ ವಿಚಾರ ಕಂಡುಬರುವುದು, ಈ ಕಾರಣಕ್ಕಾಗಿ. ಕೆರೆಯ ಪದ್ಮರಸನ ದೀಕ್ಷಾಬೋಧೆಯಲ್ಲಿ ಇದಕ್ಕೆ ಉದಾಹರಣೆಗಳಿವೆ. ಕುರುಬೆಟ್ಟದಲ್ಲಿ ಚೌಡಿಶೆಟ್ಟಿಯು ತ್ರಿಕೂಟದೇವಾಲಯ ಕಟ್ಟಿಸಿ ಒಂದು ಕೋಣೆಯಲ್ಲಿ ವಿಷ್ಣು ವಿಗ್ರಹ ಸ್ಥಾಪಿಸುತ್ತಾನೆ. ಈತನ ತಂದೆ ಅಲ್ಲಿ ಅಗ್ರಹಾರ ಸ್ಥಾಪಿಸಿದ್ದ ವಿಷಯವೂ ಇಲ್ಲಿಯ ಶಾಸನದಲ್ಲಿದೆ. ದೂರ್ವಾಸಪರಂಪರೆಯ ಮಲ್ಕಾಪುರ ಶಾಸನದಲ್ಲಿ ವಿಶ್ವೇಶ್ವರಶಿವಯತಿಯು ವಿಶ್ವೇಶ್ವರಗೋಲಕಿ ಹೆಸರಿನ 'ಅಗ್ರಹಾರ' ಸ್ಥಾಪಿಸಿ, ಅಲ್ಲಿ ದ್ರಾವಿಡ ದೇಶದಿಂದ ನಾನಾಗೋತ್ರದ

ಬ್ರಾಹ್ಮಣರನ್ನು (ನಾನಾ ಗೋತ್ರ ಸಮುದ್ಭೂತಾಯೇ ದ್ವಿಜೋತ್ತಮಾ) ನೆಲೆಗೊಳಿಸಿದ ವಿಷಯ ಕಂಡುಬರುತ್ತದೆ. ಸ್ವತಃ ಗೋಲಕಿಮಠದ ಶೈವರು ಶ್ರೀವತ್ಸಗೋತ್ರದವರೆಂದು ಶಾಸನಗಳು ತಿಳಿಸುತ್ತವೆ. ಈ ಸಂಪ್ರದಾಯದ ಕನ್ನಡ ಆರಾಧ್ಯ ವೀರಶೈವ ಕವಿಗಳಲ್ಲಿ ರೇವಣಸಿದ್ಧೇಶ್ವರ ಪುರಾಣದ ಕರ್ತೃ ಚತುರ್ಮುಖ ಬೊಮ್ಮರಸನು (೧೪೫೦) ಕಾಸ್ಯಪಗೋತ್ರದ ಬೋಧಾಯನಸೂತ್ರದ ಯಜುರ್ವೇದಿ, ಗುಮ್ಮಳಾಪುರ ಸಿಂಹಾಸನದ ನಂಜದೇವನದು ಭಾರದ್ವಾಜಗೋತ್ರ, ಬಸವಣ್ಣನ ತಂದೆ ಮಾದಿರಾಜ ಸಾಂಖ್ಯಾಯನ ಗೋತ್ರದವ. ಈ ವಿವರಗಳು ಶುದ್ಧಶೈವರು ಬ್ರಾಹ್ಮಣರಾಗಿದ್ದರೂ ಶಂಕರನ ವೈದಿಕ ಶೈವಬ್ರಾಹ್ಮಣರಲ್ಲ, ಆಗಮಿಕ ಶೈವಬ್ರಾಹ್ಮಣರೆಂದು ಸ್ಪಷ್ಟಪಡಿಸುತ್ತವೆ.

**ಕರ್ನಾಟಕದಲ್ಲಿ ಶುದ್ಧಶೈವ ಮಠಗಳು:**

ಪ್ರಾಚೀನ ಕರ್ನಾಟಕದ ಶಾಸನಗಳಲ್ಲಿ ನಕುಲೀಶ, ಪಾಶುಪತ ಮಠಗಳು ವಿಪುಲ ಸಂಖ್ಯೆಯಲ್ಲಿ ಕಂಡುಬರುತ್ತವೆ. ಅಲ್ಲಿ ರಾಸಿ, ಪಂಡಿತ, ಜೀಯ, ಶಕ್ತಿ ಪದಗಳಿಂದ ಅಂತ್ಯಗೊಳ್ಳುವ ಆಚಾರ್ಯರ ಹೆಸರು, ಸಿಂಹಪರ್ಷೆ, ಶಕ್ತಿಪರ್ಷೆ, ಪರ್ವತಾವಳಿ, ಭುಜಂಗಾವಳಿ ಇತ್ಯಾದಿ ಪರಿಭಾಷೆಗಳು ಕಂಡುಬಂದರೆ ಸಾಕು, ಅವು ನಕುಲೀಶ ಇಲ್ಲವೆ ಪಾಶುಪತ ಮಠಗಳೆಂದು ತಟ್ಟನೇ ಹೇಳಬಹುದಾಗಿದೆ. ಇದೇ ರೀತಿ 'ಸೋಮ' ಶಬ್ದದಿಂದ ಕೊನೆಗೊಳ್ಳುವ ದೇವೇಂದ್ರಸೋಮ ಇತ್ಯಾದಿ ಹೆಸರು ಶಾಸನಗಳಲ್ಲಿ ಕ್ವಚಿತ್ತಾಗಿಯಾದರೂ ಕಣ್ಣಿಗೆ ಬೀಳುತ್ತಲೇ, ಅವು ಸೋಮ ಅಥವಾ ಮಹಾವ್ರತಿ ಮಠಗಳೆಂದು ಗುರುತಿಸಬಹುದಾಗಿದೆ. ಆದರೆ ಶುದ್ಧಶೈವವನ್ನು ಸೂಚಿಸುವ ವಿಶಿಷ್ಟ ಶಬ್ದಗಳು ಶಾಸನಗಳಲ್ಲಿ ಅಷ್ಟಾಗಿ ಸಿಗುವುದಿಲ್ಲವೆಂದೇ ಹೇಳಬೇಕು. ಹೀಗಿದ್ದೂ ಹೆಸರಿನ ಕೊನೆಗೆ ಶಂಭು, ಶಿವ, ಶಿವಾಚಾರ್ಯ ಪದಗಳನ್ನೊಳಗೊಂಡ ಸೋಮಶಂಭು, ವಿಶ್ವೇಶ್ವರಶಿವ, ಈಶಾನಶಿವಾಚಾರ್ಯ ಇತ್ಯಾದಿ ವ್ಯಕ್ತಿನಾಮಗಳ ಮತ್ತು ಶುದ್ಧಶೈವ, ದೂರ್ವಾಸಾನ್ವಯ ಇತ್ಯಾದಿ ಪದಗಳ ಆಧಾರದಿಂದ ಶುದ್ಧಶೈವ ಯತಿ-ಮಠಗಳನ್ನು ಗುರುತಿಸಬಹುದು.

ಇಷ್ಟು ಹಿನ್ನೆಲೆಯಿಂದ ಮುನ್ನಡೆದರೆ, ನಮಗೆ ಸಿಗುವ ತುಂಬ ಹಳೆಯ ಆಕರ ಪಟ್ಟದಕಲ್ಲಿನ ಪೂಜಾರರ ಮನೆಯ ಕಂಬದ ಮೇಲಿನ ಶಾಸನ. ಇದು ಬಾದಾಮಿ ಚಾಲುಕ್ಯ ಕೀರ್ತಿವರ್ಮ IIನ ಅವಧಿಗೆ ಸಂಬಂಧಿಸಿದೆ. ಗಂಗಾನದಿಯ ಉತ್ತರ ತೀರದ ಮೃಗಥಣಿಕಾಹಾರದಿಂದ ಬಂದ ಜ್ಞಾನಶಿವಾಚಾರ್ಯನಿಗಾಗಿ ಶಿಲ್ಪಿ ಶುಭದೇವನು ತ್ರಿಶೂಲ ಮುದ್ರಾಂಕಿತ ಕಂಬ ನಿರ್ಮಾಣಮಾಡಿದ ವಿಷಯ ಮತ್ತು ಈ ಜ್ಞಾನಶಿವಾಚಾರ್ಯನು ಬ್ರಹ್ಮಮೂರ್ತಿ ಆರ್ಯಭಟ್ಟತ್ರಿವಿಕ್ರಮ ಚತುರ್ವೇದಿಯಿಂದ ಭೂಮಿ ಖರೀದಿಸಿ ದಾನನೀಡಿದ ವಿಷಯ ಇಲ್ಲಿದೆ. ಉತ್ತರಭಾರತದಿಂದ ಬಂದವನೆಂಬ, ಹೆಸರಿನ ಕೊನೆಯಲ್ಲಿ 'ಶಿವ' ಶಬ್ದವಿದೆಯೆಂಬ ಸೂಚನೆಗಳನ್ನಾಧರಿಸಿ ಈತನು ಶುದ್ಧಶೈವನೆಂದು ಊಹಿಸಬಹುದು.

ಈ ಊಹಾತ್ಮಕ ದಾಖಲೆಯನ್ನು ಬಿಟ್ಟರೆ ಪ್ರಾಚೀನ ಕರ್ನಾಟಕದಲ್ಲಿ (ಇಂದು

ಮಹಾರಾಷ್ಟ್ರದಲ್ಲಿ) ನಿರ್ದಿಷ್ಟವಾಗಿ ಕಂಡುಬರುವ ಪ್ರಥಮ ದಾಖಲೆಯೆಂದರೆ ಕರಹಾಡ ತಾಮ್ರಪಟ. ರಾಷ್ಟ್ರಕೂಟ ಅಕಾಲವರ್ಷ ಕೃಷ್ಣIIIನ ಕಾಲಕ್ಕೆ ಸೇರಿದ ಈ ಶಾಸನದ ಕಾಲ ಕ್ರಿ.ಶ. ೯೫೯. ಕರಹಾಡದ ವಲ್ಕಲೇಶ್ವರ ದೇವಾಲಯದ ಸ್ಥಾನಪತಿಯೂ, ಕರಂಜಖೇಟ ಸಂತತಿಯವನೂ, ಈಶಾನ್ಯಶಿವಾಚಾರ್ಯನ ಶಿಷ್ಯನೂ ಆಗಿದ್ದ ಗಗನಶಿವ ಎಂಬವನಿಗೆ, ಕರಹಾಡಪ್ರಾಂತದ ಕಲ್ಲಿ-೧೨ರ ಕಂಕೆಮ್ (ಇಂದಿನ ಕಂಕಿ) ಗ್ರಾಮವನ್ನು ಸಕಲ ತಪೋಧನರ (ವಿದ್ಯಾರ್ಥಿಗಳ) ಊಟ-ವಸತಿ ವ್ಯವಸ್ಥೆಗಾಗಿ ನೀಡಲಾದುದು ಇದರ ವಿಷಯ.

ಬಾರಕೂರ ತಾಲೂಕಿನ ಮೂಡಕೆರೆ ಗ್ರಾಮದ ಸೋಮೇಶ್ವರ ದೇವಾಲಯದ ಶಾಸನವೂ (ಎಸ್.ಆಯ್.ಆಯ್. VII-314) ಈ ಶುದ್ಧಶೈವಕ್ಕೆ ಸಂಬಂಧಪಟ್ಟುದಾಗಿದೆ. "ದೂರ್ವಾಸಮುನೀಂದ್ರ ವಂಶತಿಳಕ... ವ ಸಂಜಾತರಪ್ಪ ಶ್ರೀಮತು ಗಗನಶಿವಾಚಾರ್ಯ"ರಿಗೆ ದತ್ತಾಳುಪೇಂದ್ರ ಶ್ರೀಮಾರ ಒಡ್ಡಮದೇವಿ, ದಾನ ನೀಡಿದುದು ಇದರ ವಿಷಯ. ಮೇಲೆ ಹೇಳಿದ ಕರಹಾಡ ಶಾಸನದ ಗಗಶಿವ ಮತ್ತು ಇಲ್ಲಿಯ ಗಗನಶಿವಾಚಾರ್ಯ ಒಬ್ಬನೇ ವ್ಯಕ್ತಿಯೆಂದು ಆಂತರಿಕ ಆಧಾರದಿಂದ ಹೇಳಬಹುದಾಗಿದೆ. ಈ ಶಾಸನದ ಕಾಲ ಸುಮಾರು ೧೦ನೆಯ ಶತಮಾನ. ಇದರಿಂದ, ಇಷ್ಟು ಪೂರ್ವದಲ್ಲಿಯೇ ಈ ಶುದ್ಧಶೈವ ಶಾಖೆಯ ಮಠವು ದೂರದ ಉಡುಪಿ ಜಿಲ್ಲೆಯಲ್ಲಿ ಸ್ಥಾಪನೆಗೊಂಡಿದ್ದಿತೆಂದೂ, ಅಳುಪ ಅರಸರು ಈ ಪರಂಪರೆಯ ಭಕ್ತರಾಗಿದ್ದರೆಂದೂ ತಿಳಿದುಬರುತ್ತದೆ. ವಿಸ್ತಾರವಾದ ಆವರಣ, ಸುತ್ತಲಿನ ಕಟ್ಟಡ ಇತ್ಯಾದಿಗಳಿಂದಾಗಿ ಈ ದೇವಾಲಯ, ಇದರ ಪ್ರಾಚೀನ ವೈಭವಕ್ಕೆ ನಿದರ್ಶನವೆನಿಸಿದೆ. ಇಂದು ಶೃಂಗೇರಿಪೀಠ ಪರಂಪರೆಯ ಸ್ಮಾರ್ತಬ್ರಾಹ್ಮಣರು ಇದರ ಅರ್ಚಕರಾಗಿದ್ದಾರೆ.

ಚಿಕ್ಕಮಗಳೂರು ಜಿಲ್ಲೆಯ ಬ್ರಹ್ಮಸಮುದ್ರ ಗ್ರಾಮದ ೧೧೯೬ನೆಯ ಶಾಸನ [EC VI- ಕಡೂರು 51)ದಲ್ಲಿ "ಶುದ್ಧಶೈವ ಕಾಲೋತ್ತರೂರ್ದ್ಧ್ವಶ್ರೌತ್ರಿಯದೊಳಗೀ ಶಂಖಮಠ ಪರಮಗುಹ ಇಂದ್ರವನೀ ಕದಂಬವೃಕ್ಷಾನ್ವಯರುಮಪ್ಪ ಶ್ರೀಮತ್ರಿಲೋಚನಾಚಾರ್ಯರ್ಗ್ಗೆ ನಾಕೇಶ್ವರದೇವರ ಸ್ಥಾನವಂ ಶ್ರೀಕರಣದ ಹೆಗ್ಗಡೆ ನಾಕಿಮಯ್ಯಂ ಕಾಲಂ ಕರ್ಚ್ಚಿ ಧಾರಾಪೂರ್ವಕಂ ಮಾಡಿಕೊಟ್ಟರಿದೆಂದು ನೈಷ್ಠಿಕಸ್ಥಾನಂ...." ಎಂಬ ಉಲ್ಲೇಖವಿದೆ. ಶಂಖಮಠ, ಶುದ್ಧಶೈವ ಇತ್ಯಾದಿ ಪದಗಳನ್ನೊಳಗೊಂಡ ಇದು ಶುದ್ಧಶೈವ ಪರಂಪರೆಯದೆಂದು ಮೇಲುನೋಟಕ್ಕೆ ವ್ಯಕ್ತವಾಗುತ್ತದೆ.

೧೨೨೮ರ ಸವದತ್ತಿ ಶಾಸನ(SII X X 248) ವೊಂದು, ಕೋಲಾರದ ವಿಭು ಕೇಶಿರಾಜನು ಸವದತ್ತಿಯ ನಾಗರಕೆರೆಯಲ್ಲಿ ಮಲ್ಲಿಕಾರ್ಜುನ ದೇವಾಲಯ ನಿರ್ಮಿಸಿ, ಅದನ್ನು ತಾನು "ಆರಾಧಿಸುವ ಮಾಳ್ಕೆಯ ಶುದ್ಧಶೈವಮಾರ್ಗಿಗಳಪ್ಪ ತನ್ನ ಗುರುಭಾಗಿಗಳ ಶಿಷ್ಯರ್ ವಾಮಶಕ್ತಿ ನಾಮಾಭೀಧೇಯರಪ್ಪ.... ಲಿಂಗಯಂಗಳಿಗೆ" ಅರ್ಪಿಸಿದನೆಂದು ಹೇಳುತ್ತದೆ. ಈ ಗುರುಗಳದು 'ದೂರ್ವಾಸಾನ್ವಯ'ವೆಂದು ಇಲ್ಲಿ ಸೂಚಿಸಲಾಗಿದೆ. ದಾನ ಸ್ವೀಕರಿಸಿದ ಲಿಂಗಯಂಗಳ ಮಗ ದೇವಶಿವ, ಇವನ ಮಗ ಲಿಂಗಶಿವ ಎಂದು ಶಾಸನ ತಿಳಿಸುತ್ತಿದ್ದು, ಇಲ್ಲಿಯ 'ಶಿವ' ಪ್ರತ್ಯಯವನ್ನು ಗಮನಿಸಬೇಕು. ವಾಮಶಕ್ತಿಯನ್ನು ದಿವ್ಯ ಹಿಡಿದು ಗೆದ್ದವನೆಂದು,

ದೇವಶಿವನನ್ನು ಉದಾತ್ತ ಯಶರ್ಸ್ಸಕಲ ಶಾಸ್ತ್ರ ಸಂಪನ್ನರ್ಸ್ಸದ್ವೃತ್ತರ್ಸ್ಸಭುಜೋಪಾರ್ಜಿತ ವೃತ್ತಿಸಮಾಜರ್" ಎಂದು, ಲಿಂಗಶಿವನನ್ನು "ವಿದಿತ ಶಿವಾಗಮರತರ್ಕ್ಯ ಗುಣಗಣ ನಿಳಯರ್ಸ್ಸದಮಳ ಚರಿತ್ರ ಶ್ರೀಶೈಳದಭವನಂ ಭಕ್ತಿಯುಕ್ತವಾರಾಧಿಸುವರ್" ಎಂದು ಇಲ್ಲಿ ವರ್ಣಿಸಲಾಗಿದೆ. ಈ ಮಲ್ಲಿಕಾರ್ಜುನದೇವರಿಗೆ ಬೇರೆ ಬೇರೆ ದಾನಿಗಳು ದತ್ತಿನೀಡಿದ ವಿಷಯವನ್ನು ಸಮೀಪದ ಎಡರಾವಿ ಗ್ರಾಮದ ನಾಲ್ಕು ಶಾಸನಗಳು ತಿಳಿಸುತ್ತವೆ. ಇವುಗಳಲ್ಲಿ ಮೂರು ಶಾಸನ ಮಲ್ಲಿಸೆಟ್ಟಿಯ ಮಗ ಚೌಡಿಸೆಟ್ಟಿ (ಯಾದವರ ಮಂತ್ರಿ) ನೀಡಿದ ದಾನ ವಿವರವನ್ನೊಳಗೊಂಡಿವೆ.

ಈ ದಿಸೆಯಲ್ಲಿ ನಮ್ಮ ಗಮನ ಸೆಳೆಯುವ ಮುಖ್ಯ ಶಾಸನವೆಂದರೆ ೧೨೪೫ರ ಗೋಕಾಕ ತಾಲೂಕಿನ ಕುರುಬೆಟ್ಟ (ಇಂದಿನ ಮಮದಾಪುರ) ಗ್ರಾಮಕ್ಕೆ ಸಂಬಂಧಿಸಿದುದು. ಇದನ್ನು ಎಲ್.ಡಿ. ಬಾರ್ನೆಟ್ ಅವರು ೧೯೨೮ರ ಜನೆವರಿ ಎಪಿಗ್ರಫಿಯಾ ಇಂಡಿಕಾ ಪತ್ರಿಕೆಯಲ್ಲಿ, ಆಮೇಲೆ ಡಾ. ನಂದಿಮಠರು ಶಿವಾನುಭವ ಪತ್ರಿಕೆಯಲ್ಲಿ (೭-೬, ೧೯೩೩) ಪ್ರಕಟಿಸಿದರು. ಏಳು ಕೋಣೆಯ (ನಿಜವಾಗಿ ಇದು ಮೂರು ಕೋಣೆಯುಳ್ಳದು) ಬಸವೇಶ್ವರ ದೇವಾಲಯದಲ್ಲಿರುವ ಈ ಶಾಸನದ ಭಾಷೆ ಸಂಸ್ಕೃತ, ಕನ್ನಡ. ೬೬ ಸಾಲುಗಳ ಇದು ಮೇಲೆ ಹೇಳಿದ ದೇವಗಿರಿ ಯಾದವ ಕನ್ನರನ ಸರ್ವಾಧಿಕಾರಿ ಚಾಮುಂಡ (ಚೌಡಿಶೆಟ್ಟಿ) ಬರೆಯಿಸಿದುದಾಗಿದೆ.

ಆರಂಭದಲ್ಲಿ ಶಿವ, ವಿಷ್ಣು, ಗಿರಿಜಾಶಂಕರ ಈ ದೇವತೆಗಳ ಸ್ತುತಿ, ಮೇರುಪರ್ವತ, ದಕ್ಷಿಣಕ್ಕೆ ಜಂಬೂದ್ವೀಪ, ಈ ದ್ವೀಪದ ಮಧ್ಯದಲ್ಲಿ ಭಾರತ, ಇದರ ಭಾಗ ಕುಂತಳದೇಶ, ಇದರ ಭಾಗ ಕೂಂಡಿದೇಶ. ಇದರ ೩೦ ಹಳ್ಳಿಗಳ ವಿಭಾಗಕ್ಕೆ ಕೇಂದ್ರವಾದುದು XXX ಗಿರಿಯೆಂಬ ಗ್ರಾಮ. ಇದಕ್ಕೆ ದೇಶಭಾಷೆಯಲ್ಲಿ ಕುರುಂಬೆಟ್ಟವೆಂದು ಹೆಸರು.

ಯಾದವ ವಂಶದಲ್ಲಿ ಭಿಲ್ಲಮ, ಜೈತುಗಿ, ಸಿಂಹಣ, ಜೈತುಗಿ॥ ಆಳಿದರು. ಈ ಜೈತುಗಿ॥ಯ ಮಗ ಕನ್ನರನು "ವೇದೋದ್ಧಾರ ಪರ"ನೆನಿಸಿದ್ದನು. ಇವನ ತಮ್ಮ ಮಹಾದೇವ. ಕನ್ನರನಲ್ಲಿ ಚಿಕ್ಕದೇವನ ಮಗ ಬೀಚ, ಬೀಚನ ಮಗ ಮಲ್ಲ, ಮಲ್ಲನ ಮಗ ಈ ಚಾಮುಂಡ ಕ್ರಮವಾಗಿ ಪ್ರಧಾನರಾಗಿದ್ದರು. ಈ ಚಾಮುಂಡನಿಗೆ ಶಿವಾಗಮಜ್ಞಾನಿಯಾದ ವಾಗೀಶ್ವರಮುನೀಂದ್ರನು ಗುರು, ಕುಲದೇವತೆ (ಪುಲಿಗೆರೆಯ) ಸೋಮನಾಥ. ಈ ಚಾಮುಂಡನ ಹೆಂಡತಿ ಲಕ್ಕಾದೇವಿ. ಅಷ್ಟಾಂಗಭಕ್ತಿಯಿಂದ ಶಿವನನ್ನು ಪೂಜಿಸುತ್ತಿದ್ದ ಈ ಚಾಮುಂಡನು ಪಟ್ಟಣದ (ಹುಲಿಗೆರೆ?) ಸುತ್ತ ಅನೇಕ ಅರಮನೆಗಳನ್ನೂ ದೇವಾಲಯಗಳನ್ನೂ ಕಟ್ಟಿಸಿ ಕೀರ್ತಿಶಾಲಿಯಾಗಿದ್ದನು. ಈತನು ರಾಮಚಂದ್ರನಂತೆ ಅನೇಕ ಕ್ಷೇತ್ರಗಳಲ್ಲಿ ಲಿಂಗಗಳನ್ನು ಸ್ಥಾಪಿಸಿದ್ದನು.

ಹೊಯ್ಸಳ ಸೋಮೇಶ್ವರನ ಮದವನ್ನು ಮುರಿದವನೂ, ರಾಜಶ್ರೇಷ್ಠಿಯೂ, ಸೋಮನಾಥದೇವರ ಭಕ್ತನೂ ಆಗಿದ್ದ ಈ ಚಾಮುಂಡನು ತನ್ನ ಅರಮನೆಯ (ಹುಲಿಗೆರೆ?) ಮಧ್ಯದಲ್ಲಿ ಗಗನಮಹಾ ನೀಲಲಿಂಗವನ್ನು ಸ್ಥಾಪಿಸಿದ್ದನು. ಅನಾದಿಯಿಂದ ಬಂದ ಕುರುಂಬೆಟ್ಟ

ನಗರದ ತ್ರಿಕೂಟದೇವಾಲಯದಲ್ಲಿ ತನ್ನ ತಂದೆ ಮಲ್ಲಿನಾಥ, ಅಣ್ಣ ದೇವಶ್ರೇಷ್ಠಿಯರ ಹೆಸರಿನಲ್ಲಿ ಎರಡು ಶಿವಲಿಂಗಗಳನ್ನೂ, ಒಂದು ಮಾಧವ ವಿಗ್ರಹವನ್ನೂ ೧೨೪೫ರಲ್ಲಿ ಸ್ಥಾಪಿಸಿ, ಪುಲಿಗೆರೆಯಲ್ಲಿ ಸುಖವಾಗಿದ್ದನು.

ಶಿವನ ಶಿಷ್ಯನಾದ ದೂರ್ವಾಸನಿಂದ ಸ್ಥಾಪಿಸಲ್ಪಟ್ಟ 'ಶೈವಾನ್ವಯ'ದಲ್ಲಿ ಲಕ್ಷಾಧ್ಯಾಯಿ ವಿಶೇಷಣದಿಂದ ಶೋಭಿಸುವ ಜಗದ್ವಂದ್ಯ ವಿಮಳಶಿವದೇಶಿಕನು ಹುಟ್ಟಿದನು. ಇವನ ಸಂತಾನದಲ್ಲಿ ತ್ರ್ಯಂಬಕೇಶ ಗುರು ಶೋಭಿಸಿದನು. ಇವನಿಂದ ಭೂಶಂಕರನೆಂಬವನು ಹುಟ್ಟಿದನು. ಇವನ ಶಿಷ್ಯ ವಿಮಳಶಿವಮುನೀಂದ್ರ. ದ್ರಾವಿಡದೇಶದಲ್ಲಿ ಹುಟ್ಟಿದ ಈ ವಿಮಳಶಂಭು(ಶಿವ) ದೇಶಿಕನು ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧಾರಣಧ್ಯಾನ ಸಮಾಧಿಸಂಪನ್ನನೂ, ಶಿವಾಚಾರ್ಯನೂ, ಮಾಳವ ಮೊದಲಾದ ದೇಶಗಳ ಚಕ್ರವರ್ತಿಗಳ ಕಿರೀಟಮಂಡಿತ ಚರಣನೂ, ಮಹಾದೇಶಿಕನೂ ಆಗಿದ್ದನು. ಇವನಿಗೆ ಚಾಮುಂಡನು ಆ ಭಕ್ತ್ಯಾಸ್ಥಾನ (ಕುರುಂಬೆಟ್ಟ ದೇವಸ್ಥಾನ)ವನ್ನು ಅರ್ಪಿಸಿದನು.

ಈ ಮೊದಲು ಆದಿಶೆಟ್ಟಿಯ ತಂದೆಯಾದ ಮಹಾಪ್ರಧಾನ ಮಲ್ಲಿಸೆಟ್ಟಿಯು ಇಲ್ಲಿ ಬ್ರಹ್ಮಪುರಿಯನ್ನು ನಿರ್ಮಿಸಿದ್ದನು. ಈ ಬ್ರಹ್ಮಪುರಿಯ ಬ್ರಾಹ್ಮಣರು ಈ ಮಲ್ಲೇಶ್ವರ, ದೇವೇಶ್ವರ, ಮಾಧವದೇವರಿಗೆ, ಈ ದೇವರ ಆಚಾರ್ಯರ ಮಠಕ್ಕೆ ೧೨೪೫ರಲ್ಲಿ ದಾನ ನೀಡಿದರು.

ಕಲಿದೇವಸೆಟ್ಟಿ ಮೊದಲಾದ ವ್ಯಾಪಾರಸ್ಥರು ಸೇರಿ, ರಾಜಶ್ರೇಷ್ಠಿ ಚಾಮುಂಡರಾಜ ಕಟ್ಟಿಸಿದ ಈ ತ್ರಿಕೂಟದೇವಸ್ಥಾನಕ್ಕೆ ದಾನನೀಡಿದರು. ಈ ಗ್ರಾಮದ ಮೂಲಿಗ ಹೊಲ್ಲಿಗೌಡನು ಮಲ್ಲೇಶ್ವರ ದೇವರಿಗೆ, ನಾಗರಸನು ಕಪಿಲಭವದೇವರಿಗೆ ದತ್ತಿ ನೀಡಿದನು. ಇಷ್ಟು ಈ ಶಾಸನದ ವಿಷಯ.

ಈ ಶಾಸನದ ಕೇಂದ್ರವ್ಯಕ್ತಿಯಾದ ಚೌಡಿಶೆಟ್ಟಿಯು ಹಿಂದೆ ಹೇಳಿದ ಎಡ್ರಾಮಿ ಶಾಸನಗಳಲ್ಲಲ್ಲದೆ, ಹುಕ್ಕೇರಿ ತಾಲೂಕಿನ ಅರ್ಜುನವಾಡ (೧೨೬೦), ರಾಣೆಬೆನ್ನೂರ ತಾಲೂಕಿನ ಚೌಡದಾನಪುರ (೧೨೬೦) ಶಾಸನಗಳಲ್ಲಿಯೂ ಹೀಗೆ ಕಂಡುಬರುತ್ತಾನೆ:

ಬಸವಣ್ಣನವರ ಅಣ್ಣನ ಮೊಮ್ಮಗ ಹಾಲಬಸವದೇವನು ಹುಲಿಗೆರೆಗೆ ಬಂದು ಚೌಡಿಸೆಟ್ಟಿಯಿಂದ ದಾನ ಪಡೆದನೆಂದು ಅರ್ಜುನವಾಡ ಶಾಸನ ತಿಳಿಸುತ್ತದೆ. ಈ ಶಾಸನದಲ್ಲಿ ರಾಸಿ, ಜೀಯ, ಶಕ್ತಿ, ಪರ್ಷೆ ಇತ್ಯಾದಿ ಪದಗಳಿಲ್ಲವಾಗಿ ಅರ್ಜುನವಾಡವು ನಕುಲೀಶ, ಪಾಶುಪತ ಕೇಂದ್ರವಾಗಿರದೆ, ಶುದ್ಧಶೈವ ಕೇಂದ್ರವೇ ಆಗಿರಬಹುದು. ದೂರ್ವಾಸಪರಂಪರೆಯ ಏಕೋತ್ತರ ಶತಸ್ಥಲದ ಮಹಾಲಿಂಗದೇವನು ತನ್ನನ್ನು 'ಪುಲಿಗೆರೆಯ ಪುರವರಾಧೀಶ್ವರ' ಎಂದು ಕರೆದುಕೊಂಡಂತೆ, ಅರ್ಜುನವಾಡ ಶಾಸನದಲ್ಲಿ ಮಾದಿರಾಜನನ್ನು "ಬಾಗವಾಡಿ ಪುರವರಾಧೀಶ್ವರ" ಎಂದೂ ಹಾಲಬಸವದೇವನನ್ನು "ಕವಿಳಾಸಪುರವರಾಧೀಶ್ವರ" ಎಂದೂ ಸಂಬೋಧಿಸಲಾಗಿರುವದರಿಂದ, ಈ ಹಾಲಬಸವದೇವನೂ ಶುದ್ಧಶೈವ ಬ್ರಾಹ್ಮಣನೇ ಆಗಿರಬೇಕು. "ಪುರವರಾಧೀಶ್ವರ" ಎಂಬುದು ಶುದ್ಧಶೈವ ಆಚಾರ್ಯರ ವಿಶೇಷಣವೆಂದು ತೋರುತ್ತದೆ (ಮುಂದೆ ನೋಡಿ). ಮಡಿವಾಳ ಮಾಚಿದೇವನು ಬಸವಣ್ಣನ ತಂದೆ ಮಾದಿರಾಜನನ್ನು "ಶೈವಾಗಮಾಚಾರ್ಯ"ನೆಂದು ಕರೆದುದನ್ನು ಇಲ್ಲಿ ನೆನೆಯಬಹುದು.

ಇದೆಲ್ಲವನ್ನು ಗಮನಿಸಿದರೆ ಈ ವರೆಗೆ ವಿದ್ವಾಂಸರು ಭಾವಿಸಿರುವಂತೆ ಬಸವಣ್ಣನ ತಂದೆ ಮಾದಿರಾಜನು ಇಂದಿನ ವೈದಿಕ ಶೈವಬ್ರಾಹ್ಮಣ ಪಂಗಡವನೂ ಅಲ್ಲ, ಬಾಗವಾಡಿ ಅಗ್ರಹಾರದ ಮುಖಂಡನೂ ಅಲ್ಲ, ಶುದ್ಧಶೈವ (ಸಪತ್ನಿಕ) ಆಚಾರ್ಯನೆನಿಸುತ್ತದೆ. ಹಾಗಿದ್ದರೆ ಮಾದಿರಾಜನ ಮಗನಾದ ಬಸವಣ್ಣನೂ ಮೂಲತಃ ಶುದ್ಧಶೈವ (ಬ್ರಾಹ್ಮಣ) ನೆಂದು ಹೇಳಬೇಕಾಗುತ್ತದೆ. ಅರ್ಜುನವಾಡ ಶಾಸನದಲ್ಲಿ ಹಾಲಬಸವಿದೇವನಿಗೆ ಬಳಸಲಾದ "ಮಹಾಮಹೇಶ್ವರ" ವೆಂಬುದೂ ಈ ಮನೆತನದ ಶುದ್ಧಶೈವವನ್ನು ಬೆಂಬಲಿಸುತ್ತದೆ. ಮೇಲಿನ ಎಲ್ಲ ಶಾಸನಗಳಲ್ಲಿ ಚೌಡಿಸೆಟ್ಟಿಯು ಕೇವಲ ಶುದ್ಧಶೈವ ಕೇಂದ್ರಗಳಿಗೆ ದಾನಕೊಟ್ಟುದೂ ಅರ್ಜುನವಾಡವು ಶುದ್ಧಶೈವಕ್ಷೇತ್ರವೆಂಬುದನ್ನು ದೃಢಪಡಿಸುತ್ತದೆ.

ಗೊಪೆ ಹೆಸರಿನ ಗ್ರಾಮವನ್ನು ಶಿವದೇವನಿಗೆ ಚೌಡಿಸೆಟ್ಟಿ ದಾನವಾಗಿ ಕೊಟ್ಟ ಕಾರಣ, ಚೌಡದಾನಪುರವೆಂದು ಅದು ಹೊಸ ಹೆಸರು ಪಡೆಯಿತು. ಇಲ್ಲಿಯ ಯತಿಯ ಹೆಸರಿನ ಮುಂದೆ ಜೀಯ, ರಾಸಿ, ಸೋಮ ಇತ್ಯಾದಿ ಪ್ರತ್ಯಯಗಳಿಲ್ಲವಾಗಿ ಈ ಕ್ಷೇತ್ರ ನಕುಲೀಶ, ಪಾಶುಪತ ಮಹಾವ್ರತಿಗಳಿಗೆ ಸಂಬಂಧಿಸದೆ, ಶುದ್ಧಶೈವರಿಗೇ ಸಂಬಂಧಿಸಿರಬೇಕು. ಮತ್ತು ದಾನನೀಡಿದ ಚೌಡಿಸೆಟ್ಟಿ ಶುದ್ಧಶೈವನೆಂದು ಹಿಂದೆ ವಿವರಿಸಲಾಗಿದೆ. ಈ ಶಿವದೇವರು ಚೌಡದಾನಪುರಕ್ಕೆ ಕಾಕತೀಯರ ಓರುಗಲ್ಲಿನಿಂದ ಬಂದರೆಂಬ ಹೇಳಿಕೆ ಈ ಭಾಗದಲ್ಲಿ ಪ್ರಚಾರದಲ್ಲಿದೆ. ಕಾಕತೀಯರು ಶುದ್ಧಶೈವ ಗೋಳಕಿಮಠದ ಭಕ್ತರೆಂಬುದು ತಿಳಿದ ಸಂಗತಿಯೇ ಆಗಿದೆ. ಒಟ್ಟಾರೆ, ಬಾಗೇವಾಡಿ ಬಸವಣ್ಣನ ವಂಶಜರಂತೆ ಚೌಡದಾನಪುರ ಶಿವದೇವನೂ ಮೂಲತಃ ಶುದ್ಧಶೈವ ಬ್ರಾಹ್ಮಣ ಪರಂಪರೆಯವನಾಗಿದ್ದಾನೆ. ಅದಕ್ಕಾಗಿಯೇ ಶಿವದೇವನು ತಾನು ಬಸವಣ್ಣನಂತೆ ಅವತರಿಸಿದವನೆಂದೂ, ಅವನಂತೆ ಲಿಂಗಕ್ಕೆ ಜಂಗಮಕ್ಕೆ ಹಿಂಗದೆ ದಾಸತ್ವ ಮಾಡುವವನೆಂದೂ ಶಾಸನದಲ್ಲಿ ಅಭಿಮಾನದಿಂದ ಹೇಳಿಕೊಂಡಿದ್ದಾನೆ. ಇನ್ನೂ ಒಂದು ವಿಶೇಷವೆಂದರೆ ಈ ಶಿವದೇವನ ಹಾಗೆಯೇ ಅರ್ಜುನವಾಡ ಶಾಸನದ ಹಾಲಬಸಲಿದೇವನೂ ತನ್ನನ್ನು "ಜಂಗಮಲಿಂಗಾವತಾರ" ಎಂದು ಕರೆದುಕೊಂಡಿದ್ದಾನೆ. ಅದೇನೇ ಇರಲಿ, ಚೌಡದಾನಪುರ ಶಾಸನ ಮತ್ತು ಅರ್ಜುನವಾಡ ಶಾಸನ ಒಂದೇ ದಿನ ಹುಟ್ಟಿವೆ. ಮತ್ತು ಮೂಲತಃ ಶುದ್ಧಶೈವ ಬ್ರಾಹ್ಮಣ ಸಂಪ್ರದಾಯದ್ದಾಗಿರುವ ಚೌಡದಾನಪುರಮಠ ಇಂದು ಬಾಳೆಹಳ್ಳಿಶಾಖೆಗೆ ಸಂಬಂಧಿಸಿದೆ.

**ಕೆಲವು ಸಂದೇಹಗಳು :**

ಅರ್ಜುನವಾಡ ಶಾಸನೋಕ್ತ ಬಸವಣ್ಣನವರ ಶುದ್ಧಶೈವ ಕುಟುಂಬವು ಸವದತ್ತಿ ತಾಲೂಕಿನ ಮುನವಳ್ಳಿಗೆ ವಲಸೆಹೋಗಿರುವ ಸಾಧ್ಯತೆಯಿದೆಯೆಂದು ನಾನು ಬೇರೆಡೆ ಊಹಿಸಿದ್ದೇನೆ.* ಅರ್ಜುನವಾಡ - ಶಾಸನ ಚೌಡದಾನಪುರಶಾಸನಗಳಂತೆ ಮುನವಳ್ಳಿ ಶಾಸನ (೧೨೫೨)ದಲ್ಲಿ "ಜಂಗಮ ಲಿಂಗಾವತಾರ" ಎಂಬ ಪ್ರಯೋಗವಿದೆ. ಹೀಗಾಗಿ ಮುನವಳ್ಳಿಯದು

---

* ಶಾಸನಗಳಿಂದ ಬಸವಣ್ಣನ ಬಗ್ಗೆ ಇನ್ನಷ್ಟು ಸಂಗತಿಗಳು ಮಾರ್ಗ ೪. ಪು. ೪೩೮

ಕಾಳಾಮುಖಮಠವಾಗಿದ್ದರೂ ಈ ಶುದ್ಧಶೈವ ಶಾಖೆಯನ್ನೂ ಮನ್ನಿಸಿರಬಹುದೆನಿಸುತ್ತದೆ.

ಈ ದೂರ್ವಾಸಾನ್ವಯದ ಗುರುಪರಂಪರೆಯಲ್ಲಿ ಸುಪ್ರಸಿದ್ಧನಾದವ ಸೋಮಶಂಭು. ಈತನು ಕರ್ಮಕಾಂಡವನ್ನು ಪ್ರತಿಪಾದಿಸುವ "ಸೋಮಶಂಭು ಪದ್ಧತಿ' ಹೆಸರಿನ ಮಹತ್ವದ ಧರ್ಮಗ್ರಂಥವನ್ನು ರಚಿಸಿದ್ದಾನೆ. ದೇವಗಿರಿಯಾದವ ಭಿಲ್ಲಮನ ಕಾಲದ ಇಂಡಿ ತಾಲೂಕಿನ ಸಾಲೋಟಗಿ ಶಾಸನದಲ್ಲಿ ಅಮರೇಶಮುನಿಯನ್ನು "ವೇದಾಗಮ ಸೋಮಶಂಭು ಲಾಕುಳ ಸಿದ್ಧಾಂತ"ಪ್ರವೀಣನೆಂದು ಬಣ್ಣಿಸಲಾಗಿರುವುದರಿಂದ ಈತನು ಸೋಮಶಂಭುವಿನ ಶುದ್ಧಶೈವ ಪರಂಪರೆಯವನೋ, ಲಾಕುಸಿದ್ಧಾಂತದ ನಕುಲೀಶ ಪರಂಪರೆಯವನೋ ಎಂಬ ಸಂದೇಹ ಹುಟ್ಟುತ್ತದೆ.

ಇವಲ್ಲದೆ ಬಹುಶಃ ಹುಬ್ಬಳ್ಳಿ ತಾಲೂಕಿನ ಬ್ಯಾಹಟ್ಟಿ (೧೨೩೫), ಛಬ್ಬಿ, ಸಿಗ್ಗಾಂವ ತಾಲೂಕಿನ ಚಿಕ್ಕಮಲ್ಲೂರ, ಕಾರಡಗಿ, ನವಲಗುಂದ ತಾಲೂಕಿನ ಅಣ್ಣಿಗೆರೆ (ವೀರಗೊಗ್ಗಿದೇವ) ಶಾಸನಗಳಲ್ಲಿಯೂ ಈ ಸಂಪ್ರದಾಯದ ಉಲ್ಲೇಖಗಳಿವೆ.

ಸೂಡಿ ಶಾಸನದಲ್ಲಿ (EI- XV 74 & 75 ಕ್ರಿ.ಶ. 10ನೆಯ ಶತಮಾನ) ಮೂರ್ತಿ ಶಿವಾಚಾರ್ಯ, ಮುಳಗುಂದ ಶಾಸನದಲ್ಲಿ (SIJ XI-64 ಕ್ರಿ.ಶ. ೧೦೨೮) ಭಾವಶಿವ, ಕಣವಿಶಾಸನದಲ್ಲಿ (SIJ XI-i 156 ಕ್ರಿ.ಶ. ೧೦೫೫) ಇಂದ್ರಶಿವ, ಬಂಕಾಪುರ ಶಾಸನದಲ್ಲಿ (SIJ XVIII-66 ಕ್ರಿ.ಶ. ೧೦೬೨) ವರುಣಶಿವ ಹೆಸರುಗಳು ಕಂಡುಬರುತ್ತವೆ. 'ಶಿವ' ಅಂತ್ಯವುಳ್ಳ ಇಂಥ ಹೆಸರುಗಳು ಬೇರೆ ಶಾಸನಗಳಲ್ಲಿಯೂ ಸಿಗುತ್ತವೆ. ಇವರಲ್ಲಿ ಕೆಲವರಾದರೂ ಶುದ್ಧಶೈವ ಸಂಪ್ರದಾಯದವರಿರಬಹುದು.

ಶ್ರೀ ಕಪಟ್ರಾಳ ಕೃಷ್ಣರಾಯರು ತಮ್ಮ 'ಕರ್ನಾಟಕದ ಲಾಕುಳ ಶೈವರ ಇತಿಹಾಸ'ದ ೬ನೆಯ ಪ್ರಕರಣದಲ್ಲಿ "ಬ್ರಾಹ್ಮಣರಲ್ಲೂ ಮಾಹೇಶ್ವರರೆನಿಸಿಕೊಳ್ಳುವ ಶುದ್ಧ ಶ್ರೌತ್ರೀಯ ಶೈವರೂ ಇದ್ದರು " ಎಂದು ಹೇಳುತ್ತ, ಕೆಲವು ಶುದ್ಧಶೈವ ಶಾಸನಗಳನ್ನು ಕುರಿತು ಚರ್ಚಿಸಿದ್ದಾರೆ. ಇವರಿಗೂ ಮೇಲೆ ಹೇಳಿದ ಶುದ್ಧಶೈವರಿಗೂ ಇರುವ ಸಂಬಂಧ ಶೋಧಿಸಬೇಕಾಗಿದೆ. ಇದಲ್ಲದೆ ಕಾಶ್ಮೀರದ ಸಹವಾಸಿಕುಲದ ಬ್ರಾಹ್ಮಣರ ಬಗ್ಗೆಯೂ ಇವರ "ಕರ್ನಾಟಕದ ಲಾಕುಳಶೈವರ ಇತಿಹಾಸ"ದಲ್ಲಿ ಚರ್ಚಿಸಲಾಗಿದೆ. ಮೇಲೆ ಹೇಳಿದ ಶುದ್ಧಶೈವವನ್ನು ಕುರಿತ ಸವದತ್ತಿ ಶಾಸನದಲ್ಲಿಯೂ" ಸಹವಾಸಿಕುಲ" ಎಂಬ ಶಬ್ದ ಕಂಡುಬರುತ್ತಿರುವುದರಿಂದ ಈ ಪ್ರಯೋಗದ ಬಗೆಗೂ ಪರಿಶೀಲಿಸಬೇಕಾಗಿದೆ.

ಶಾಸನಗಳಲ್ಲಿ ಮಾಹೇಶ್ವರ, ವೀರಮಾಹೇಶ್ವರ ಪದಗಳು ಆಗಾಗ ಕಂಡುಬರುತ್ತವೆ. ಇವುಗಳನ್ನು ಶುದ್ಧಶೈವದ ಹಿನ್ನೆಲೆಯಲ್ಲಿ ಇಡಿಯಾಗಿ ಪರಿಶೀಲಿಸುವುದು ಅವಶ್ಯವಿದೆ.

**ಶುದ್ಧಶೈವದ ಗೋಳಕಿಮಠ:**

ಶುದ್ಧಶೈವದ ದೂರ್ವಾಸ ಗುರುಪರಂಪರೆಯವರು ಕದಂಬ ಗುಹಮಠ, ಶಂಖಮಠ, ತೇರಾಂಬಿಮಠ, ಆಮರ್ದಕ ಮಠ, ಗೋಳಕಿಮಠ ಮೊದಲಾದವುಗಳನ್ನು, ಇವುಗಳ

ಶಾಖಾಮಠಗಳನ್ನು ಭಾರತದ ಬೇರೆ ಬೇರೆ ಭಾಗಗಳಲ್ಲಿ ಸ್ಥಾಪಿಸಿದ್ದರು. ಇವುಗಳಲ್ಲಿ ಪ್ರಸಿದ್ಧವಾದುದು ಗೋಳಕಿಮಠ ಸಂಪ್ರದಾಯ. ಗೋಳಕಿ ಹೆಸರು ಬಂದುದಕ್ಕೆ ಕಾರಣ ಹೀಗಿದೆ: ಗಂಗೆ ನರ್ಮದೆಗಳ ಮಧ್ಯದ ಇಂದಿನ ಮಧ್ಯಪ್ರದೇಶದ ಪ್ರಾಚೀನ ಹೆಸರು ಡಹಳಮಂಡಳ (=ಚೇದಿರಾಜ್ಯ). ಇದನ್ನು ಆಳುತ್ತಲಿದ್ದ ಕಲಚುರಿವಂಶದ ಯುವರಾಜದೇವ (೯೧೫-೯೪೫) ಹೆಸರಿನ ರಾಜನು ದೂರ್ವಾಸ ಸಂಪ್ರದಾಯದ ಸದ್ಭಾವಶಂಭು ಅಥವಾ ಭಾವಶಂಭು ಎಂಬ ಆಚಾರ್ಯರಿಗೆ ತ್ರಿಲಕ್ಷ ಪ್ರದೇಶವನ್ನು ದಾನನೀಡಿದನು. ಈ ದಾನ ಪಡೆದ ಭಾವಶಂಭು ಆಚಾರ್ಯನು ಚೇದಿಯ ರಾಜಧಾನಿಯಾದ ತ್ರಿಪುರಿಯ ನೆರೆಯಲ್ಲಿ ಒಂದು ಮಠವನ್ನು ಕಟ್ಟಿಸಿದ. ಅದು ಗೋಲಕಿಮಠವೆಂದು ಪ್ರಸಿದ್ಧಿ ಪಡೆಯಿತು. ಇದರ ಇನ್ನೊಂದು ಹೆಸರು ಗೋಲಗಿರಿ ಮಠ. ಉತ್ತರದ ಈ ಮಠ ಸಂಪ್ರದಾಯ ಕ್ರಿ.ಶ. ೯-೧೦ನೆಯ ಶತಮಾನಗಳಲ್ಲಿ ತಮಿಳುನಾಡನ್ನು ಪ್ರವೇಶಿಸಿ, ಚೋಳ ಅರಸರಿಂದ ಪ್ರವರ್ಧಮಾನಕ್ಕೆ ಬಂದಿತು. ಇದರೊಂದಿಗೆ ಈ ಸಂಪ್ರದಾಯದ ಬೇರೆ ಮಠಗಳೂ ಇಲ್ಲಿ ಹುಟ್ಟಿಕೊಂಡವು. ಆಮೇಲೆ ೧೧ನೆಯ ಶತಮಾನದಲ್ಲಿ ಆಂಧ್ರಪ್ರದೇಶವನ್ನು ಪ್ರವೇಶಿಸಿ, ಇದು ಅನೇಕ ಕಡೆಗಳಲ್ಲಿ ಗೋಲಕಿಮಠಗಳನ್ನು ಸ್ಥಾಪಿಸಿತು. ಹೀಗೆ ತಮಿಳು ಮತ್ತು ಆಂಧ್ರಪ್ರದೇಶಗಳಲ್ಲಿ ವ್ಯಾಪಕವಾಗಿ ಹಬ್ಬಿದ ಗೋಳಕಿಮಠ ಸಂಪ್ರದಾಯ ನೆರೆಯ ಕರ್ನಾಟಕದಲ್ಲಿ ಹಬ್ಬಿರಲಾರದೇ? ಎಂಬ ಪ್ರಶ್ನೆ ಉದ್ಭವಿಸುವದು ಸಹಜ. ಮೇಲೆ ಹೇಳಿದ ಮೂಡಕೆರೆ, ಕುರುಬೆಟ್ಟ, ಸವದತ್ತಿ, ಅರ್ಜುನವಾಡ, ಚೌಡದಾನಪುರ ಮೊದಲಾದವುಗಳಲ್ಲಿ ಕೆಲವಾದರೂ ಗೋಳಕಿಮಠ ಸಂಪ್ರದಾಯಕ್ಕೆ ಸಂಬಂಧಿಸಿರಬಹುದು.

ಈ ಸಂದರ್ಭದಲ್ಲಿ ಗೋಳಕಿಮಠದತ್ತ ನಮ್ಮ ಗಮನ ಸೆಳೆಯುವವ, ದೂರ್ವಾಸನಿಂದ ತನ್ನ ಗುರುಪರಂಪರೆಯನ್ನು ಆರಂಭಿಸುವ ಪುಲಿಗೆರೆಯ ಮಹಾಲಿಂಗದೇವ. ಪುಲಿಗೆರೆ(ಲಕ್ಷ್ಮೇಶ್ವರ)ಯಲ್ಲಿ ಗೋಲಗೇರಿಮಠ ಹೆಸರಿನ ಒಂದು ವೀರಶೈವಮಠ ಈಗಲೂ ಇದ್ದು, ಮಹಾಲಿಂಗದೇವನ ನೆನಪನ್ನು ಪ್ರತಿನಿಧಿಸುತ್ತದೆ. ಬಹುಶಃ ಇದು ಇಂದು ಕರ್ನಾಟಕದಲ್ಲಿರುವ ಗೋಳಕಿ(ಗೋಲಗಿರಿ)ಮಠ ಸಂಪ್ರದಾಯದ ನಿರ್ದಿಷ್ಟ ಕುರುಹಾಗಿದೆ. ಕುರುಬೆಟ್ಟಶಾಸನ ಹೇಳುವಂತೆ ಚೌಡಿಸೆಟ್ಟಿಯ ಗ್ರಾಮ ಪುಲಿಗೆರೆ. ಇಂದು ಇಲ್ಲಿಯ ಗೋಲಗೇರಿ ಮಠದ ಸುತ್ತಲೂ ವೀರಶೈವ ಶೆಟ್ಟರ ಮನೆತನಗಳಿದ್ದು, ಇವರೆಲ್ಲ ಈ ಮಠದ ಭಕ್ತರಾಗಿದ್ದಾರೆ. ಬಹುಶಃ ಅಂದಿನ ಚೌಡಿಸೆಟ್ಟಿಗೂ ಇಂದಿನ ಈ ಶೆಟ್ಟರ ಮನೆತನಗಳಿಗೂ ಸಂಬಂಧವಿರಬಹುದು. ಕಪ್ಪತಗುಡ್ಡ ಮೊದಲಾದ ಸ್ಥಳಗಳಲ್ಲಿ ಗೋಲಗೇರಿ (ಗೊಲ್ಲಾಳೇಶ್ವರ) ಹೆಸರಿನ ಗುಡಿಗಳಿವೆ. ಗುಣಕಿಮಠ ಅಡ್ಡಹೆಸರಿನ ಮನೆತನಗಳೂ ಅಲ್ಲಲ್ಲಿ ಇದ್ದು, ಇವು ಗೋಳಕಿಮಠವನ್ನು ನೆನಪಿಗೆ ತರುತ್ತವೆ. 'ಪುರವರಾಧೀಶ್ವರ'ವೆಂಬುದು ಇವರ ವಿಶೇಷ ಉಪಾಧಿಯೆಂದು ಈ ಹಿಂದೆ ನೋಡಿದ್ದೇವೆ. ಪುರ ಹೆಸರಿನ ಗ್ರಾಮಗಳೂ, ಪುರದ ಮಠ, ಪುರವರ್ಗದ ಮಠ ಅಡ್ಡ ಹೆಸರಿನ ಕುಟುಂಬಗಳೂ, ಪುರದ ಓಣಿ (ಹಾವೇರಿ) ಹೆಸರಿನ ಓಣಿಗಳೂ, ಪುರದ ವೀರಪ್ಪ (ಅಣ್ಣಿಗೆರೆ), ಪುರದ ಸಿದ್ಧೇಶ್ವರ (ಹಾವೇರಿ) ಹೆಸರಿನ ದೇವಾಲಯಗಳೂ ಇಂದು ಅಲ್ಲಲ್ಲಿ ಕಂಡುಬರುತ್ತವೆ. ಪುರದ ನಾಗಣ್ಣ ಹೆಸರಿನ ವಚನಕಾರನಿದ್ದಾನೆ. ಈ ಪುರ ಪರಿಸರದಲ್ಲಿ ವೀರಭದ್ರ ದೇವತೆ

ಕಂಡುಬರುವುದು ಸಾಮಾನ್ಯ. ಉಗ್ರ ಆಚರಣೆಯ ಪುರವಂತರೂ ಈ ಸಂಪ್ರದಾಯದವರಾಗಿರಬಹುದು. ಒಟ್ಟಾರೆ, ಇವುಗಳಿಗೂ ಗೋಳಕಿಮಠ ಅಥವಾ ಗೋಲಗೇರಿಮಠಗಳಿಗೂ ಇರಬಹುದಾದ ಸಂಬಂಧ ಶೋಧಿಸಬೇಕು.

**ಶುದ್ಧಶೈವದ ಭಿಕ್ಷಾವೃತ್ತಿಮಠ ಮತ್ತು ಅಸಂಖ್ಯಾತ ಮಾಹೇಶ್ವರ :**

ಗೋಳಕಿಮಠಕ್ಕೆ ಸಂಬಂಧಿಸಿದ ಮಲ್ಕಾಪುರ ಮೊದಲಾದ ಶಾಸನಗಳು ಹೇಳುವಂತೆ, ಸದ್ಭಾವಶಂಭುಯತಿಯು ಡಹಳಮಂಡಲದ ಯುವರಾಜದೇವನಿಂದ ತ್ರಿಲಕ್ಷಪ್ರದೇಶವನ್ನು ಭಿಕ್ಷೆಯಾಗಿ ಪಡೆದ ಕಾರಣ, ಇವರಿಗೆ ಭಿಕ್ಷಾವೃತ್ತಿ ಮಠದವರೆಂಬ ಹೆಸರು ರೂಢಗೊಂಡಿತು. ತಮಿಳುನಾಡಿನ ಶಾಸನಗಳಲ್ಲಿ ಗೋಳಕಿಮಠಗಳಿಗೆ ಭಿಕ್ಷಾಮಠಗಳೆಂದು ಕರೆದುದು ಈ ಅಭಿಪ್ರಾಯವನ್ನು ಬೆಂಬಲಿಸುತ್ತದೆ. ತೀವ್ರ ಶೈವಾಭಿಮಾನಿಗಳಾದ ಇವರಿಗೆ ವೀರಭಿಕ್ಷಾವೃತ್ತಿಗಳೆಂಬ ಹೆಸರೂ ಇದ್ದಿತು. ಈ ಹೆಸರು ಕಾರಣವಾಗಿಯೇ ಶೈವಕ್ಕೆ ವೀರಶೈವ ಹೆಸರು ರೂಢಗೊಂಡಿರಬಹುದು. ಕಾಕತೀಯರ ಮಂತ್ರಿ ಆರಾಧ್ಯ ಪೆರ್ಗಡೆಯ ನೆರವಿನಿಂದ "ಅಸಂಖ್ಯಾತ ಮಾಹೇಶ್ವರ" ವರ್ಗದವರು ಶ್ರೀಶೈಲ ಮಲ್ಲಿಕಾರ್ಜುನದೇವಸ್ಥಾನದ ಪೂಜಾವ್ಯವಸ್ಥೆಯನ್ನು ಬಲತ್ಕಾರದಿಂದ (?) ವಶಪಡಿಸಿಕೊಂಡರೆಂದು ಇಲ್ಲಿಯ ಶಾಸನ (ಕ್ರಿ.ಶ. ೧೩೧೨) ತಿಳಿಸುತ್ತದೆ. ಈ ಕೆಲಸವನ್ನು ಆ ಕಾಲದಲ್ಲಿ ರಾಜಕೀಯವಾಗಿಯೂ ಬಲಶಾಲಿಗಳಾಗಿದ್ದ ಶುದ್ಧಶೈವರೇ ಮಾಡಿರಬಹುದಾದ ಕಾರಣ, ಇವರ ಇನ್ನೊಂದು ಹೆಸರು "ಅಸಂಖ್ಯಾತ ಮಾಹೇಶ್ವರ"ವೆಂದೂ ಇರಬಹುದು..

'ಅಸಂಖ್ಯಾತ ಮಾಹೇಶ್ವರ' ಎಂಬ ಪದ ಆಂಧ್ರದ ಶ್ರೀಶೈಲ, ಉಮಾಮಹೇಶ್ವರ, ತ್ರಿಪುರಾಂತಕಂ ಗ್ರಾಮಗಳ ಶಾಸನಗಳಲ್ಲಿಯೂ ಬಳಕೆಯಾಗಿದೆ. ಕರ್ನಾಟಕದ ಅಣ್ಣಿಗೇರಿ (SII XV-59 ಕ್ರಿ.ಶ. ೧೧೮೪) ಶಾಸನದಲ್ಲಿ 'ಅಸಂಖ್ಯಾತ ಸಮಯಪುತ್ರ', 'ಅಸಂಖ್ಯಾತ ಗಣ', ತಾಳಿಕೋಟೆ ಶಾಸನ(೧೧೮೪)ದಲ್ಲಿ 'ಅಸಂಖ್ಯಾತ ಸಂಖ್ಯಾಭಿಧೇಯ ಮಹಾxx' 'ಅಸಂಖ್ಯಾತಗಣ', ಇಂಗಳಗಿ ಶಾಸನ(೧೨೮೦)ದಲ್ಲಿ 'ವೀರಗಣಂಗಳಸಂಖ್ಯಾತರು' ಇತ್ಯಾದಿ ಪ್ರಯೋಗಗಳು ಕಂಡುಬರುತ್ತವೆ. ಇಲ್ಲೆಲ್ಲ ಇವರು ಅನ್ಯಮತೀಯರನ್ನು ಹಿಂಸಿಸಿದ ಘಟನೆಗಳು ದಾಖಲಾಗಿವೆ. ಶ್ರೀಶೈಲ ಮಲ್ಲಿಕಾರ್ಜುನ ದೇವಾಲಯದ ರಂಗಮಂಟಪದ ಕಂಬಗಳ ಮೇಲೆ ಆತ್ಮಬಲಿಯ ವೀರಭಕ್ತರ ಶಿಲ್ಪಗಳನ್ನು ಕೆತ್ತಲಾಗಿದೆ. ಮಲ್ಕಾಪುರಂ ಶಾಸನದಲ್ಲಿ ಬೀಜಚ್ಛೇದ, ಶಿರಚ್ಛೇದ, ಕುಕ್ಷಿಚ್ಛೇದ ಮಾಡಿಕೊಳ್ಳುವವರ ಉಲ್ಲೇಖವಿದೆ. ಬಹುಶಃ ಈ ಉಗ್ರರು ಶುದ್ಧಶೈವರೇ ಆಗಿರಬಹುದು.

**ಶುದ್ಧಶೈವ ಬ್ರಾಹ್ಮಣ - ಪಂಚಾಚಾರ್ಯಪೀಠ:**

ಪಾಶುಪತ, ನಕುಲೀಶ, ಮಹಾವ್ರತ, ಶ್ರೋತ್ರೀಯ (ಶುದ್ಧ)ಗಳೆಂಬ ಶಾಖೆಗಳು ಆಗಮಿಕ ಶೈವ ಬ್ರಾಹ್ಮಣವೆಂದು ಈ ಹಿಂದೆ ಚರ್ಚಿಸಲಾಗಿದೆ. ಇವುಗಳಲ್ಲಿ ಶ್ರೋತ್ರೀಯ

(ಶುದ್ಧ)ಶೈವ ಬ್ರಾಹ್ಮಣ ಕುಟುಂಬವಾಗಿದ್ದಿತು, ಬಾಗೆವಾಡಿಯ ಮಾದಿರಾಜನದು. ಈ ಕುಟುಂಬದ ಮೂಲ ನೆಲೆ ಕಮ್ಮೆನಾಡಿನ ಆಂಧ್ರಪ್ರದೇಶ.ಮಲ್ಲಿಕಾರ್ಜುನ ಪಂಡಿತಾರಾಧ್ಯ ಈ ಆಂಧ್ರಪ್ರದೇಶವನಾಗಿದ್ದು, ಈತನ ಪರಂಪರೆಯ ಶುದ್ಧಶೈವರು ತುಮಕೂರು ಜಿಲ್ಲೆ ಪ್ರವೇಶಿಸಿದ ಫಲವಾಗಿ ದಕ್ಷಿಣಕರ್ನಾಟಕದಲ್ಲಿ ಆರಾಧ್ಯಶೈವರ ಪ್ರಭಾವ ಬೆಳೆಯಿತು. ಇವರು, ಶರಣ ಚಳುವಳಿಯಿಂದ ನಿಸ್ತೇಜಗೊಂಡಿದ್ದ ಮಿಕ್ಕ ಮೂರು ಶೈವಶಾಖೆ (ನಕುಲೀಶ, ಪಾಶುಪತ, ಮಹಾವ್ರತ)ಯ ಮಠಗಳನ್ನೂ, ರೇವಣಸಿದ್ಧ ಮರುಳಸಿದ್ಧರ ನಾಥಸಂಪ್ರದಾಯದ ಮಠಗಳನ್ನೂ ಎಚ್ಚರಿಸಿ, ೧೫-೧೬ನೆಯ ಶತಮಾನಗಳಲ್ಲಿ ನಾಲ್ಕುಪೀಠಗಳನ್ನು ರೂಪಿಸಿಕೊಂಡರು. ಈ ಕೆಲಸಮಾಡಿದವರು ಆರಾಧ್ಯ ಪರಂಪರೆಯವರಾದುದರಿಂದ, ಇವರು ರೇವಣಸಿದ್ಧನನ್ನು ರೇವಣಾರಾಧ್ಯ, ಮರುಳಸಿದ್ಧನನ್ನು ಮರುಳಾರಾಧ್ಯ, ಏಕಾಂತರಾಮಯ್ಯನನ್ನು ಏಕೋರಾಮಾರಾಧ್ಯರನ್ನಾಗಿಸಿ, ತಮ್ಮ ಪಂಡಿತಾರಾಧ್ಯಪೀಠವನ್ನು ಜೋಡಿಸಿ ಚತುರಾಚಾರ್ಯಪೀಠಗಳನ್ನು, ಬಳಿಕ ಕಾಶಿಯನ್ನೂ ಸೇರಿಸಿಕೊಂಡು ಪಂಚಾಚಾರ್ಯಪೀಠಗಳನ್ನು ಸ್ಥಾಪಿಸಿದರು. ಹೀಗೆ ಇದು ಆರಾಧ್ಯರು ಮಾಡಿಕೊಂಡ ವ್ಯವಸ್ಥೆಯಾದುದರಿಂದ ಚತುರಾಚಾರ್ಯ (ಪಂಚಾಚಾರ್ಯ) ಸ್ವರೂಪವನ್ನು ವಿವರಿಸುವ ಕೃತಿ 'ಆರಾಧ್ಯಮಠಸ್ಥಲ' ಎಂಬ ಹೆಸರಿನಿಂದ ಹುಟ್ಟಿಕೊಂಡಿದೆ.

ಕನ್ನಡ 'ಆರಾಧ್ಯ ಚರಿತ್ರೆ'ಯ ಕರ್ತೃ ನೀಲಕಂಠಾಚಾರ್ಯನ ಪೂರ್ವಜರು ಆಂಧ್ರಪ್ರದೇಶದ ಆರಾಧ್ಯಸಂಪ್ರದಾಯದವರಾಗಿದ್ದಾರೆ. ಈತನ ವಂಶದ ಮೂಲಪುರುಷ ಸೋಮಶಂಭುದೇಶಿಕನು ದೂರ್ವಾಸಪರಂಪರೆಯ ಶುದ್ಧಶೈವನಾಗಿರುವುದನ್ನು ನೆನೆದರೆ ಶುದ್ಧಶೈವದ ಮುಂದುವರಿಕೆಯೇ ಆರಾಧ್ಯಶೈವವೆಂದು, ಈ ಆರಾಧ್ಯಶೈವರೇ ಚತುರಾಚಾರ್ಯರೆಂದು ಮತ್ತೂ ಸ್ಪಷ್ಟವಾಗುತ್ತದೆ.

"ಶ್ರೀಮತ್ ಸಜ್ಜನ ಶುದ್ಧಶಿವಾಚಾರ" ಎಂಬ ಪದಗುಚ್ಛವನ್ನೊಳಗೊಂಡ ದಕ್ಷಿಣಕರ್ನಾಟಕದ ಶಾಸನಗಳು ಪಂಚಾಚಾರ್ಯಮಠಕ್ಕೆ ಸಂಬಂಧಿಸಿವೆ. ಇಲ್ಲಿಯ 'ಶುದ್ಧಶಿವಾಚಾರ'ವೆಂಬುದು ಶುದ್ಧಶೈವವನ್ನೇ ಸೂಚಿಸುವುದರಿಂದ ಪಂಚಾಚಾರ್ಯಪೀಠದವರು ಶುದ್ಧಶೈವರೆಂದು ಹೇಳುವುದು ಅನಿವಾರ್ಯವಾಗುತ್ತದೆ. ಈ ಶುದ್ಧಶೈವ ಧಾರ್ಮಿಕ ಮಹಾಪುರುಷರಿಗೆ ಶಾಸನ-ಕಾವ್ಯಗಳಲ್ಲಿ ಬಳಸುವ 'ಶಿವಾಚಾರ್ಯ' ಎಂಬ ಉಪಾಧಿಯನ್ನು ಪಂಚಾಚಾರ್ಯ ಪರಂಪರೆಯವರು ಇಂದಿಗೂ ಬಳಸುತ್ತಿರುವುದು ಇವುಗಳ ಪರಸ್ಪರ ಸಂಬಂಧದ ದ್ಯೋತಕವಾಗಿದೆ. ಈ ಶುದ್ಧಶೈವದ ಪರ್ಯಾಯನಾಮ ಸಿದ್ಧಾಂತಶೈವ. ಇದನ್ನು ಗಮನದಲ್ಲಿಟ್ಟುಕೊಂಡೇ ಪಂಚಾಚಾರ್ಯ ಪರಂಪರೆಯವರು ತಮ್ಮದೆಂದು ಹೇಳುವ ಧರ್ಮಗ್ರಂಥಕ್ಕೆ "ಸಿದ್ಧಾಂತ ಶಿಖಾಮಣಿ" ಹೆಸರನ್ನಿಟ್ಟಂತಿದೆ.

**ಶುದ್ಧಶೈವದ ಗಣ್ಯವ್ಯಕ್ತಿಗಳು :**

ಮೇಲೆ ಹೇಳಿದಂತೆ ಶುದ್ಧಶೈವ ಪರಂಪರೆಯ ಗೋಲಕಿಮಠಗಳು ಕರ್ನಾಟಕದಲ್ಲಿ ಕಡಿಮೆಯಿದ್ದರೂ ನೆರೆಯ ಆಂಧ್ರಪ್ರದೇಶ, ತಮಿಳುನಾಡುಗಳಲ್ಲಿ ವಿಪುಲವಾಗಿದ್ದ ಕಾರಣ,

ಶುದ್ಧ ಶೈವಭಕ್ತರ ಸಂಖ್ಯೆ ಒಳನಾಡಿನಲ್ಲಿ ಕಡಿಮೆ, ಪೂರ್ವದ ಗಡಿನಾಡಿನಲ್ಲಿ ಹೆಚ್ಚು ಕಂಡುಬರುತ್ತದೆ. ೧೨ನೆಯ ಶತಮಾನದ ಬಳಿಕ ಲಿಂಗಾಯತಸಂಪ್ರದಾಯದಲ್ಲಿ ಇಲ್ಲಿಯ ಪಾಶುಪತ, ನಕುಲೀಶ, ಮಹಾವ್ರತಿ ಶೈವರಂತೆ ಈ ಶುದ್ಧಶೈವರು ಮತಾಂತರಹೊಂದಿದರೂ, ಬರಬರುತ್ತ ಆ ಸಂಪ್ರದಾಯಕ್ಕೆ ವೀರಶೈವ ಹೆಸರಿನಿಂದ ವಾರಸುದಾರರಾಗಿ ನಿಂತರು. ಇವರಲ್ಲಿ ಎತ್ತಿ ಹೇಳಬೇಕಾದ ಮೊದಲ ವ್ಯಕ್ತಿ ಕೆರೆಯ ಪದ್ಮರಸ. ಜನ್ನಿವಾರ ಇಷ್ಟಲಿಂಗಗಳೆರಡನ್ನೂ ಧರಿಸಿದ ಈತನು ಶುದ್ಧಶೈವ ಸಿದ್ಧಾಂತ ಮತ್ತು ಶರಣಸಿದ್ಧಾಂತಗಳ ಸಮನ್ವಯವೆಂಬಂತೆ ತನ್ನ 'ದೀಕ್ಷಾಬೋಧೆ' ರಚಿಸಿದ್ದಾನೆ. ಕರ್ನಾಟಕದಲ್ಲಿ "ಕೆರೆಯಪದ್ಮರಸನ ಬಗೆ" ಹೆಸರಿನ ಗೋತ್ರವೂ ಬೆಳೆದು ಬರುವುದಕ್ಕೂ ಕಾರಣನಾಗಿದ್ದಾನೆ. ತ್ರಿಭುವನ ತಾತನೊಂದಿಗೆ ವಾದಕ್ಕೆ ನಿಂತ ಇವನಿಗೆ ನೆರವಾಗಲು ಹೋದ ಹುಲಿಗೆರೆಯ ಪುರಾಣದ ಮಾಯಿದೇವಭಟ್ಟ, ನಾಗನಾಥಾರ್ಯ (ಸಂಸ್ಕೃತ ವೀರಮಾಹೇಶ್ವರಾಚಾರ ಕರ್ತೃ), ಜಗದಾರಾಧ್ಯನಾಗಿದೇವ (ಸಂಸ್ಕೃತ ಶಿವಜ್ಞಾನ ಸಮುಚ್ಚಯದ ಕರ್ತೃ), ಕುಮಾರಪದ್ಮರಸ, ಹಂಪೆಯ ರಾಘವಾಂಕ ಮೊದಲಾದವರು ಶುದ್ಧಶೈವರೋ, ಶರಣಧರ್ಮವನ್ನು ಸಮನ್ವಯ ಮಾಡಿಕೊಂಡ ಶುದ್ಧಶೈವರೋ ಆಗಿರಬೇಕು. ಇವರ ಸಮಕಾಲೀನನಾದ ಹರಿಹರನೂ ಶುದ್ಧಶೈವನಿದ್ದು, ಆಮೇಲೆ ಶರಣಮಾರ್ಗ ಪ್ರವೇಶಿಸಿದುದಕ್ಕೆ ಹೀಗೆ ಆಧಾರಗಳಿವೆ : ಅಲ್ಲಮಪ್ರಭುವು ಕಾಮಲತೆಯನ್ನು ಮದುವೆಯಾಗಿರುವನೆಂದು ಕವಿ ಹರಿಹರನೇ ಹೇಳಿರುವನೆಂದು ಮುಕುಂದಪೆದ್ದಿ ನುಡಿಯುತ್ತಲೇ ಜಕ್ಕಣಾಚಾರ್ಯನು "ಶೈವಮತದ ಕವಿಗಳಿಗೆಯು.... ವೀರಶೈವ ಪ್ರಮಥರ ಮಹತ್ವ ತಿಳಿಯದು" ಎಂದು ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ(I- 57ರಿಂದ60) ಕೃತಿ ಖಂಡಿಸುವಲ್ಲಿ, ಹರಿಹರನು ಶೈವನೆಂಬ ಸೂಚನೆಯಿದೆ. "ಶುದ್ಧಶೈವ ಭಕ್ತಿನಿಷ್ಠೆಯಿಂದ ಹಂಪೆಯ ವಿರೂಪಾಕ್ಷನೆ ತನಗೆ ಮನೆದೈವ ಕುಲದೈವವಾಗಿ ಪೂಜೆ ಮಾಡುತ್ತ" ಹರಿಹರನು ಹಂಪೆಯಲ್ಲಿ ಕಾಲ ಕಳೆಯುತ್ತಲಿದ್ದನೆಂದು ಇದೇ ಕೃತಿ (II-೫೪) ಹೇಳುವ ಮೂಲಕ, ಈತನು ಶೈವದಲ್ಲಿಯೇ ಶುದ್ಧಶೈವನೆಂದು ಸ್ಪಷ್ಟಪಡಿಸುತ್ತದೆ. ಆದರೆ ಈತನು ಮುಂದೆ ವೀರಶೈವನಾದನೆಂಬುದನ್ನು "ಹಂಪೆಯ ಹರೀಶ್ವರನೆ ಶೈವವುಳಿದು ಕಟ್ಟಾಣಿ ವರ ವೀರಶೈವವನುದ್ಧರಿಸಿದ"ನೆಂಬ ವೀರಶೈವಾಮೃತ ಮಹಾಪುರಾಣ (೮-೮-೩೪)ದ ಈ ಮಾತು ದೃಢಪಡಿಸುತ್ತದೆ. ವಿಜಯನಗರ ಸಾಮ್ರಾಜ್ಯ ಸ್ಥಾಪಕರೆಂದು ಹೇಳಲಾಗುತ್ತಿರುವ ಕಾಶೀ ವಿಲಾಸಕ್ರಿಯಾಶಕ್ತಿಗಳು ಶುದ್ಧಶೈವರೆಂದು ವಿದ್ವಾಂಸರು ಹೇಳುತ್ತಾರೆ.*

೧೪ನೆಯ ಶತಮಾನಕ್ಕೆ ಬಂದರೆ ಬಸವಪುರಾಣದ ಭೀಮಕವಿಯ ಪೂರ್ವಜರು ಮೂಲತಃ ಶುದ್ಧಶೈವರಾಗಿದ್ದರೆನಿಸುತ್ತದೆ. ೧೫ನೆಯ ಶತಮಾನದ ಹೊತ್ತಿಗಾಗಲೇ ಶುದ್ಧಶೈವರು ಶರಣಧರ್ಮದಲ್ಲಿ ಇಡಿಯಾಗಿ ಮತಾಂತರಗೊಂಡಿದ್ದರು. ತನ್ನ ಗುರುಪರಂಪರೆ ದೂರ್ವಾಸಾನ್ವಯದ ಶುದ್ಧಶೈವವಾಗಿದ್ದರೂ ಮಹಾಲಿಂಗದೇವನ ಶಿಷ್ಯ ಜಕ್ಕಣ್ಣಾರ್ಯನು (೧೫ನೆಯ ಶತಮಾನ) ಕವಿ ಹರಿಹರ(೧೩ನೆಯ ಶತಮಾನ)ನನ್ನು ಕುರಿತು "ಶೈವಮತದ

* ಬ್ರಹ್ಮಸೂತ್ರದರ್ಶನ - ಟಿ.ಎಸ್. ಮಲ್ಲಪ್ಪ ಪುಟ. ೧೭೬.

ಕವಿಗಳಿಗೆಯು.... 'ವೀರಶೈವ ಪ್ರಮಥರ ಮಹತ್ವ ತಿಳಿಯದು" ಎಂದು ವೀರಶೈವ ಪಕ್ಷವಹಿಸಿ ಮಾತನಾಡಿದುದೇ ಇದಕ್ಕೆ ಸಾಕ್ಷಿಯಾಗಿದೆ. ಶುದ್ಧಶೈವನಾಗಿರಬಹುದಾದ ಉಪಮನ್ಯುಶಿವಾಚಾರ್ಯನ ಪರಂಪರೆಯ ಮಗ್ಗೆಯ ಮಾಯಿದೇವನ ಕೃತಿಗಳಲ್ಲಿ (ವೀರ)ಶೈವೀಕರಣ ಕ್ರಿಯೆ ಕಂಡುಬರುತ್ತದೆ. ಇವರಲ್ಲಿ ಮಹಾಲಿಂಗದೇವನು ಶರಣರ ವಚನ ಬಳಸಿ ಏಕೋತ್ತರಶತ ರಚಿಸಿದ- ಅಲ್ಲಮನ ವಚನ ಬಳಸಿ ಷಟ್‌ಸ್ಥಲ ಕಟ್ಟು ರೂಪಿಸಿದ. ಜಕ್ಕಣಾರ್ಯನು ತನ್ನ ಸಂಸ್ಕೃತ "ಏಕೋತ್ತರ ಶತಸ್ಥಲೀ" ಕೃತಿಯಲ್ಲಿ ನೂರೊಂದು ಸ್ಥಲ ವಿಚಾರದ ಪ್ರವರ್ತಕರು ಬಸವ, ಚೆನ್ನಬಸವ, ಅಲ್ಲಮರೆಂದು ಹೇಳಿದ. ಮಗ್ಗೆಯ ಮಾಯಿದೇವನು ಅಲ್ಲಮನ ವಚನಗಳನ್ನು ಷಟ್‌ಸ್ಥಲ ಕ್ರಮದಲ್ಲಿ ಯೋಜಿಸಿ ಸಂಸ್ಕೃತಕ್ಕೆ ಅನುವಾದಿಸಿದ ಮತ್ತು ತನ್ನ ಏಕೋತ್ತರ ಶತಸ್ಥಲದಲ್ಲಿ ಈ ತತ್ವದ ಪ್ರವರ್ತಕ ಬಸವಣ್ಣನೆಂದು ಸಾರಿದ. ಹೆಚ್ಚಿನದಾಗಿ "ಜಯ ಬಸವೇಶ ಭಕ್ತಜನಭಾಗ್ಯ ಶುಭೋದಯ ವೀರಶೈವ ನಿರ್ಣಯ ಪರಮಾವತಾರ" ಎಂದು ಭಕ್ತಿಯಿಂದ ಬಾಗಿದ. ಪ್ರೌಢದೇವರಾಯನ ಕಾಲದ ಇವರ ರಚನೆಗಳಲ್ಲಿ (ವೀರ)ಶೈವೀಕರಿಸಿಕೊಂಡ ಶರಣರ ತತ್ವಜ್ಞಾನವೇ ತುಂಬಿದೆಯೆಂದು ಹೇಳಬಹುದು. ಆದುದರಿಂದ ಪ್ರೌಢದೇವರಾಯನ ಕಾಲವನ್ನು "ಶರಣತತ್ವಜ್ಞಾನದ (ವೀರ)ಶೈವೀಕರಣಯುಗ"ವೆಂದು ಇನ್ನು ಮೇಲೆ ಕರೆಯಬಹುದಾಗಿದೆ.

**ಶುದ್ಧಶೈವದ ಸಿದ್ಧಾಂತಸ್ವರೂಪ:**

ಸಿರಸಂಗಿ, ನೇಸರಗಿ, ಸಗರ ಶಾಸನಗಳು ಪ್ರಾಚೀನ ಕರ್ನಾಟಕದಲ್ಲಿ ಕಾಳಾಮುಖ (ನಕುಲೀಶ), ಪಾಶುಪತ, ಮಹಾವ್ರತಿ, ಶ್ರೋತ್ರೀಯ (ಶಿವಸಮಯ) - ಈ ಶೈವಧರ್ಮಗಳು ಅಸ್ತಿತ್ವದಲ್ಲಿದ್ದವೆಂದು ತಿಳಿಸುತ್ತವೆ. ವಾತುಲಾಗಮದ ಪ್ರಕಾರ ಕೊನೆಯದಾದ (ಶ್ರೋತ್ರೀಯ)ಶೈವದಲ್ಲಿ ಸಾಮಾನ್ಯಶೈವ, ಮಿಶ್ರಶೈವ, ಶುದ್ಧಶೈವ, ವೀರಶೈವಗಳೂ, ವೀರಶೈವದಲ್ಲಿ ಸಾಮಾನ್ಯವೀರಶೈವ, ವಿಶೇಷ ವೀರಶೈವ, ನಿರಾಭಾರಿ ವೀರಶೈವಗಳೂ ಶಾಖೆಗಳಾಗಿ ಬೆಳೆದಿದ್ದವು. ಈ ಎರಡೂ ಹೇಳಿಕೆಗಳನ್ನು ಸಮೀಕರಿಸಿದರೆ




ಎಂಬ ಶಾಖೆ, ಉಪಶಾಖೆಗಳ ಒಂದು ಚಿತ್ರ ಕಾಣಿಸುತ್ತದೆ. ಈ ನಕ್ಷೆಯಲ್ಲಿ (ಶ್ರೋತ್ರೀಯ) ಶೈವದ ಒಂದು ಶಾಖೆ ಶುದ್ಧಶೈವವೆಂದು ಕಾಣುತ್ತಿದ್ದರೂ ಇವೆರಡೂ ಒಂದೇಯೆಂದು

ಭಾವಿಸಬಹುದು. ವೀರಶೈವದಿಂದ ಶುದ್ಧಶೈವವು ಭಿನ್ನವೆಂದು ಈ ನಕ್ಷೆಯಿಂದ ಗೊತ್ತಾಗುತ್ತಿದ್ದು, ಇದರ ಸ್ವರೂಪ ಲಕ್ಷಣವನ್ನು ಪ್ರತಿಪಾದಿಸುವ ಅನೇಕ ಶಾಸ್ತ್ರಗಳು ಹುಟ್ಟಿಕೊಂಡಿವೆ. ಇವುಗಳಲ್ಲಿ ಸೋಮಶಂಭುವಿನ ಸೋಮಶಂಭುಪದ್ಧತಿ (೧೦೭೩), ತಮಿಳುನಾಡಿನ ಅಘೋರಶಿವನ (೧೧೫೮) ಅಘೋರಶಿವಪದ್ಧತಿ, ರತ್ನತ್ರಯವೃತ್ತಿ ಮೊದಲಾದ ಸಂಸ್ಕೃತಶಾಸ್ತ್ರಗ್ರಂಥಗಳು ಮತ್ತು ಮೆಯ್‌ಕಂಡದೇವನ ಶಿವಜ್ಞಾನಬೋಧಮ್ ಮೊದಲಾದ ತಮಿಳು ಗ್ರಂಥಗಳು ಮಹತ್ವಪೂರ್ಣವೆನಿಸಿವೆ. ಈ ರಚನೆಗಳಿಂದಾಗಿ ತಮಿಳುನಾಡಿನಲ್ಲಿ ೬೩ ಪುರಾತನರ ಭಕ್ತಿತತ್ವ ಮತ್ತು ಶುದ್ಧಶೈವ ತತ್ವಗಳು ಅಭಿನ್ನವೆಂಬ ಭ್ರಮೆ ಬೆಳೆದು ಬಂದಿತು. ಇಂಥದೇ ಕೆಲಸ ಕರ್ನಾಟಕದಲ್ಲಿಯೂ ನಡೆದು, ಶರಣತತ್ವ ಮತ್ತು ಶುದ್ಧಶೈವತತ್ವ ಒಂದೇ ಎಂಬ ಭ್ರಮೆ ನಿರ್ಮಾಣವಾಯಿತು.[೧] ಆದರೆ ಸೋಮಶಂಭು ಮೊದಲಾದ ಶುದ್ಧಶೈವ ಆಚಾರ್ಯರನ್ನಾಗಲೀ, ಅವರ ಸಂಸ್ಕೃತ ಶಾಸ್ತ್ರಗ್ರಂಥಗಳನ್ನಾಗಲೀ ಕನ್ನಡ ವಚನಗಳು ಸ್ಮರಿಸಿಲ್ಲವಾಗಿ, ಶುದ್ಧಶೈವದಲ್ಲಿ ಶರಣರ ಷಟ್ಸ್ಥಲ ಇತ್ಯಾದಿ ವಿಚಾರಗಳಿಲ್ಲವೆಂದೂ, ಆ ಗ್ರಂಥಗಳನ್ನು ಶರಣರು ಮನ್ನಿಸುತ್ತಿರಲಿಲ್ಲವೆಂದೂ ಸ್ಪಷ್ಟವಾಗುತ್ತದೆ.

ಈ ಶುದ್ಧಶೈವದ ಸ್ವರೂಪ ಅನೇಕ ಆಗಮಗಳಲ್ಲಿ ಕಂಡುಬರುತ್ತಿದ್ದು, ಸೂಕ್ಷ್ಮಾಗಮ (ಪು.೮೧)ದಲ್ಲಿ ಸಿಗುವ ವಿವರ ಹೀಗಿದೆ: "ಶಿವನು ಶುದ್ಧನೆಂದು ಕರೆಯಲಾಗಿದೆ. ಶಿವನಿಂದ ಉದ್ಭವವಾದುದು ಶೈವ ಎನಿಸುತ್ತದೆ. ನಾನು ಶುದ್ಧ, ಶಿವಸಂಭೂತನೆನ್ನುವ ಭಾವವುಳ್ಳವನೇ ಶುದ್ಧಶೈವನು (೨೨). ಸತ್ಯಾದಿ ಲಕ್ಷಣ ಉಳ್ಳ ಪಾರ್ವತಿಯೊಡನಿರುವ ಶಿವನೊಬ್ಬನೇ ಮಹಾದೇವ. ಉಳಿದ ದೇವತೆಗಳು ಆತನ ಭಕ್ತರು, ಆತನಿಂದ ಹುಟ್ಟಿದವರು, ಆತನನ್ನೇ ಆಶ್ರಯಿಸಿದವರು (೨೩). ಶಿವಪೂಜಾ ಸಮಯದಲ್ಲಿ ಬೇರೆ ಬೇರೆ ದೇವತೆಗಳ ವಿಗ್ರಹಗಳು ಕಾಣುವಂತಿದ್ದರೆ ಬೇರೆ ಉಪಾಯವಿಲ್ಲದೆ, ಅವುಗಳಿಗೆ ತೆರೆಹಾಕಿ ಮರೆಮಾಡಿ ಪೂಜಿಸಬೇಕು, ಬೇರೆ ರೀತಿಯಾಗಿ ಅಲ್ಲ (೨೪). ಗುರು ಕರುಣಿಸಿದ ಲಿಂಗವನ್ನು ಕರಪೀಠದಲ್ಲಿಟ್ಟು ಪೂಜಿಸಬೇಕು.[೨] ಗುರುವು ಉಪದೇಶಿಸಿದ ನಿಯಮಗಳನ್ನು ಸಾವಧಾನದಿಂದ ಆಚರಿಸಬೇಕು(೨೫). ಪ್ರಮಾದದಿಂದ ಲಿಂಗ ಕೆಳಗೆ ಬಿದ್ದರೆ, ನಷ್ಟವಾದರೆ, ಸುಟ್ಟರೆ, ಕಳ್ಳತನವಾದರೆ, ಭಿನ್ನವಾದರೆ, ಬೇರೆ ಯಾವ ಕಾರಣದಿಂದಲಾದರೋ ದೂಷಿತವಾದರೆ, ಗುರುಚರಣವನ್ನು ನೆನೆದು, ಗುರುದೇವನಾಜ್ಞೆಯಂತೆ ಅಘೋರಮಂತ್ರವನ್ನು ಜಪಿಸಿ, ಅದನ್ನೇ ಆಗಲಿ, ಬೇರೆ ಲಿಂಗವನ್ನಾಗಲಿ ಧರಿಸಿ ಪುನಃ ಪೂಜಿಸಬೇಕು (೨೬-೨೭). ಅಜಾಗರೂಕತೆಯಿಂದ ನಿಯಮದಲ್ಲಿ ಲೋಪ ಉಂಟಾದರೆ, ಮೂಲ ಪಂಚಾಕ್ಷರಿ ಮಹಾಮಂತ್ರವನ್ನು ಜಪಿಸಬೇಕು. ಹೇ ದೇವೀ, ವ್ರತ ಆಚಾರಾದಿಗಳು ಲೋಪವಾದರೆ ಇದೇ ಪ್ರಾಯಶ್ಚಿತ್ತ. ಇದುವೇ ಶುದ್ಧಶೈವ ಮತ."

---

೧. ಇದೇ ರೀತಿ ತಮಿಳುನಾಡಿನಲ್ಲಿ ಆಳ್ವಾರ್ ವೈಷ್ಣವಸಂಪ್ರದಾಯಕ್ಕೆ ಶ್ರೀವೈಷ್ಣವದ ಕಸಿಕಟ್ಟಲಾಯಿತು.

೨. ಆದಯ್ಯನ ವಚನಗಳಲ್ಲಿ ಭೂಪೀಠದಲ್ಲಿಟ್ಟು ಪೂಜಿಸಬೇಕೆಂದು ಹೇಳಲಾಗಿದೆ. ಇವನದೇ ಸರಿಯೆಂದು ತೋರುತ್ತದೆ.

ವೀರಶೈವವು ಈ ಶುದ್ಧಶೈವದಿಂದ ಹೇಗೆ ಭಿನ್ನವೆಂಬುದನ್ನು ಆದಯ್ಯನ ವಚನಗಳು ಕೆಳಗಿನಂತೆ ತಿಳಿಸುತ್ತವೆ.

ವೀರಶೈವ, ಶುದ್ಧಶೈವವೆಂಬುಭಯ ಪಕ್ಷದ ನಿರ್ಣಯ ನಿಷ್ಪತ್ತಿಯೆಂತೆಂದಡೆ:
ಮಲ ಮಾಯಾ ಮಲಿನವನು ಶ್ರೀಗುರು ತನ್ನ ಕೃಪಾವಲೋಕನದಿಂದದನಳಿದು,
ನಿರ್ಮಲನಾದ ಶಿಷ್ಯನ ಉತ್ತಮಾಂಗದಲ್ಲಿ ಪರಮ ಚಿತ್ಕಳೆಯನು
ಹಸ್ತಮಸ್ತಕ ಸಂಯೋಗದ ಬೆಡಗಿನಿಂದ ತೆಗೆದು,
ಆ ಮಹಾಪರಮ ಕಳೆಯನು ಸ್ಥಲದಲ್ಲಿ ಕೂಡಿ, ಮಹಾಲಿಂಗವೆಂದು ನಾಮಕರಣಮಂ ಮಾಡಿ,
ಶಿಷ್ಯನಂಗದ ಮೇಲೆ ಬಿಜಯಂಗೆಯಿಸಿ,
ಕರ್ಣದ್ವಾರದಲ್ಲಿ ಪ್ರಾಣಂಗೆ ಆ ಮಹಾಲಿಂಗವ ಜಪಿಸುವ
ಪ್ರಣಮಪಂಚಾಕ್ಷರಿಯನು ಪ್ರವೇಶಮಂ ಮಾಡಿ, ಅಂಗ (ಲಿಂಗೈ) ಪೀಠದಲ್ಲಿರಿಸಿ,
ಅಭಿನ್ನಪ್ರಕಾಶವಾದ ಪೂಜೆಯ ಮಾಡೆಂದು ಹೇಳಿದನು.
ಇದೀಗ ವೀರಶೈವದ ಲಕ್ಷಣವೆಂದರಿವುದು.

ಇನ್ನು ಶುದ್ಧಶೈವರಿಗೆ
ಗುರು ತನ್ನ ನಿರೀಕ್ಷಣ ಮಾತ್ರದಲ್ಲಿ ಅವನ ಶುದ್ಧಾಂಗನ ಮಾಡಿ,
ಆತನ ಕರ್ಣದ್ವಾರದಲ್ಲಿ ಪಂಚಾಕ್ಷರಿಯನುಪದೇಶವಂ ಮಾಡಿ,
ಸ್ಥಾವರಲಿಂಗ ಪೂಜಕನಾಗಿರೆಂದು ಲಿಂಗವನು ಕೊಟ್ಟು,
ಭೂಪೀಠದಲ್ಲಿರಿಸಿ ಅರ್ಚನೆ ಪೂಜನೆಯ ಮಾಡೆಂದು ಹೇಳಿದನು.
ಹೇಳಲಿಕ್ಕಾಗಿ ಶುದ್ಧಶೈವನೇ ಪೀಠದಲ್ಲಿರಿಸಿ
ಭಿನ್ನಭಾವಿಯಾಗಿ ಅರ್ಚನೆ ಪೂಜನೆಯಂ ಮಾಡುವನು,
ವೀರಶೈವನು ಅಂಗದ ಮೇಲೆ ಧರಿಸಿ
ಅಭಿನ್ನಭಾವದಿಂದ ಅರ್ಚನೆ ಪೂಜನೆಯಂ ಮಾಡುವನು.

ಶುದ್ಧಶೈವರಿಗೆ ನೆನಹು, ವೀರಶೈವರಿಗೆ ಸಂಗವೆಂತೆಂದಡೆ:
ಅತ್ಯಂತ ಮನೋರಮಣನಪ್ಪಂತಹ ಪುರುಷನ ಒಲುಮೆಯಲ್ಲಿಯ ಸ್ತ್ರೀಗೆ
ನೆನಹಿನ ಸುಖದಿಂದ ಸಂಗಸುಖವು ಅತ್ಯಧಿಕವಪ್ಪಂತೆ
ಶುದ್ಧಶೈವದ ನೆನಹಿಂಗೂ ವೀರಶೈವದಲ್ಲಿಯ ಸಂಗಕ್ಕೂ ಇಷ್ಟಂತರ.
ಆ ಲಿಂಗದಲ್ಲಿ ಶುದ್ಧಶೈವನ ನೆನಹು ನಿಷ್ಪತ್ತಿಯಾದೊಡೆ ಸಾರೂಪ್ಯನಹನು,
ಆ ಲಿಂಗದಲ್ಲಿ ವೀರಶೈವನ ನೆನಹು ನಿಷ್ಪತ್ತಿಯಾದೊಡೆ ಸಾಯುಜ್ಯನಹನು,
ಅದು ಕಾರಣ ಸ್ಥಾವರಲಿಂಗದ ಧ್ಯಾನಕ್ಕೂ, ಪ್ರಾಣಲಿಂಗದ ಸಂಗಕ್ಕೂ ಇಷ್ಟಂತರ.

ಸ್ಥಾವರಲಿಂಗದ ಧ್ಯಾನದಿಂದ ಸಾರೂಪ್ಯಪದವನ್ನೈದಿದ ತೆರನೆಂತೆಂದಡೆ
ಅವನು ಭ್ರಮರಧ್ಯಾನದಿಂದ ಆ ಭ್ರಮರನ ರೂಪಾದಂತೆ
ಶೈವನು ಶಿವಧ್ಯಾನದಿಂದ ಶಿವನಸಾರೂಪ್ಯ ಪದವನ್ನೈದಿ
ಇದಿರಿದ್ದು ಭಿನ್ನಪದದಲ್ಲಿರುತ್ತಿಹನು, ಮತ್ತಂ,
ವೀರಶೈವನು ಜಂಗಮಾರ್ಚನೆಯಿಂ ಮಾಡಿ
ಪ್ರಾಣಲಿಂಗ ಸಂಬಂಧಿಂ ಸಾಯುಜ್ಯಪದವನ್ನೈದಿದ ತೆರನೆಂತೆಂದಡೆ :
ಅಗ್ನಿಯ ಸಂಗವ ಮಾಡಿ ಕರ್ಪುರ ನಾಸ್ತಿಯಾದ ಹಾಂಗೆ
ಈತನು ಶಿವನಲ್ಲಿ ಸಾಯುಜ್ಯವನ್ನೈದಿ ರೂಪ ನಾಸ್ತಿಯಾಗಿ ಶಿವನೆಯಹನು.
ಇದು ಕಾರಣ ಶುದ್ಧಶೈವ ವೀರಶೈವದಂತರ ಮಹಾಂತರ.
ಈ ಪ್ರಕಾರ ಕಾಣಾ, ಸೌರಾಷ್ಟ್ರ ಸೋಮೇಶ್ವರಾ.

ಗುರುವು ನಿರೀಕ್ಷಣ ಮಾತ್ರದಿಂದ ಶಿಷ್ಯನ ಮಲಿನವನ್ನು ಕಳೆದು, ಹಸ್ತಮಸ್ತಕ ಸಂಯೋಗದಿಂದ ಅವನ ಉತ್ತಮಾಂಗದ ಚಿತ್ಕಳೆಯನ್ನು ಹೊರತೆಗೆದು, ಮಹಾಲಿಂಗವೆಂದು ಹೆಸರಿಟ್ಟು, ಅದನ್ನು ಪಂಚಾಕ್ಷರಿ ಬೋಧೆಯೊಂದಿಗೆ ಅಂಗ (ಅಂಗೈ) ಪೀಠದಲ್ಲಿರಿಸಿ ಪೂಜಿಸಲು ಹೇಳುವುದು, ವೀರಶೈವ.

ಗುರುವು ನಿರೀಕ್ಷಣ ಮಾತ್ರದಿಂದ ಶಿಷ್ಯನ ಮಲಿನವನ್ನು ಕಳೆದು, (ಹಸ್ತಮಸ್ತಕ ಸಂಯೋಗವಿಲ್ಲದೆ) ಪಂಚಾಕ್ಷರಿ ಬೋಧೆ ಮಾಡಿ, ಸ್ಥಾವರಲಿಂಗ ಪೂಜಕನಾಗೆಂದು ಲಿಂಗವನು ಕೊಟ್ಟು, ಭೂಪೀಠದಲ್ಲಿಟ್ಟು ಪೂಜಿಸಲು ಹೇಳುವುದು, ಶುದ್ಧಶೈವ.

ಅದು ಅಭಿನ್ನಭಾವ, ಇದು ಭಿನ್ನಭಾವ. ಅದು ಸತಿಪತಿಯ ನೆನಹು, ಇದು ಸತಿಪತಿಯ ಸಂಗ. ಅದು ಸಾರೂಪ್ಯ, ಇದು ಸಾಯುಜ್ಯ. ಅದು ಕೀಟಭ್ರಮರ ನ್ಯಾಯ, ಇದು ಅಗ್ನಿ ಕರ್ಪುರನ್ಯಾಯ ಎಂದು ಈ ವಚನದ ಅರ್ಥ.

ಇದೇ ಆದಯ್ಯನ "ಶುದ್ಧಶೈವದ ನಿರ್ಧರವನರಿವ ಬುದ್ಧಿಯನನುಕರಿ[ಸೆ], ಆ ಶುದ್ಧಶೈವದ ಪರಿಯೆಂತೆಂದಡೆ...." ಎಂದು ಆರಂಭವಾಗುವ ವಚನದಲ್ಲಿ ಶುದ್ಧಶೈವ, ವೀರಶೈವಗಳ ಅಂತರವನ್ನು ಕುರಿತ ವಿಚಾರದ ಸಾರಾಂಶ ಹೀಗಿದೆ: "ಶಿವನೊಂದಿಗೆ ದುರ್ಗಿ, ವಿನಾಯಕ, ಭೈರವ ಮೊದಲಾದ ದೇವತೆಗಳನ್ನಿಟ್ಟು ಪೂಜಿಸಿ ಚತುರ್ವಿಧ ಪದವಿ ಪಡೆಯುವವರು ಶುದ್ಧಶೈವರು. ಲಿಂಗಜಂಗಮ ತೃಪ್ತಿಪಡಿಸಿ ಮಹಾಲಿಂಗ ಪದವಿ ಪಡೆಯುವವರು ವೀರಶೈವರು".

ಆದಯ್ಯನ ವಚನಗಳ ಪ್ರಕಾರ ಶುದ್ಧಶೈವವು ದ್ವೈತವಾಗಿದ್ದರೆ, ವಚನೋಕ್ತ ವೀರಶೈವ (ಶರಣಧರ್ಮ)ವು ಅದ್ವೈತವಾಗಿದೆ. ತಮಿಳು ಶೈವವು ಮೂಲತಃ (೬೩ ಪುರಾತನರ ಸಂದರ್ಭದಲ್ಲಿ) ಅದ್ವೈತವಾಗಿದ್ದು, ಮುಂದೆ (ಶಿವಾಚಾರ್ಯರ ಕಾಲಾವಧಿಯಲ್ಲಿ) ದ್ವೈತಕ್ಕೆ ತಿರುಗಿದಂತಿದೆ. ಅದಕ್ಕಾಗಿಯೇ ಅದ್ವೈತಿಗಳಾದ ಬಸವಾದಿ ಶರಣರು ದ್ವೈತಿಗಳಾದ ತಮಿಳು ಶಿವಾಚಾರ್ಯರನ್ನು ಬಿಟ್ಟು ಅದ್ವೈತಿಗಳಾದ ತಮಿಳು ಪುರಾತನರನ್ನು ಸ್ತುತಿಸುವಂತೆ ತೋರುತ್ತದೆ. ಅದೇ ರೀತಿ ಕರ್ನಾಟಕದಲ್ಲಿದ್ದ ಶಿವಾಚಾರ್ಯ ಪರಂಪರೆಯವರನ್ನು (ಕೊಂಡಗುಳಿ ಕೇಶಿರಾಜ ಇತ್ಯಾದಿ)

ಬಿಟ್ಟು, ಇಲ್ಲಿಯ ನಿಕಟಪೂರ್ವದ ಆದರ್ಶರಾದ ಜೇಡರದಾಸಿಮಯ್ಯ, ಮಾದರಚೆನ್ನಯ್ಯರನ್ನು ಬಸವಾದಿ ಶರಣರು ಸ್ತುತಿಸುವಂತಿದೆ. ಹಾಗಿದ್ದರೆ ಈ 'ತಮಿಳು ಪುರಾತ'ರು, 'ಕರ್ನಾಟಕದ ಆದ್ಯ'ರು ಯಾವ ಪಂಥದವರು? ಬಹುಶಃ ಇವರಿಬ್ಬರೂ ನಾಥಪಂಥದವರಾಗಿರಬಹುದೇ? ತಮಿಳುಪುರಾತನರಲ್ಲಿ ಏಣಾದಿನಾಥ ಮೊದಲಾದವರಿದ್ದಾರೆ. ಕರ್ನಾಟಕದ ಜೇಡರ ದಾಸಿಮಯ್ಯನ ಮುದ್ರಿಕೆ 'ರಾಮನಾಥ' ಎಂದು ಇದೆ. ಹೀಗಾಗಿ ಕರ್ನಾಟಕ ತಮಿಳುಗಳಲ್ಲಿ ಹರಡಿಸಿಕೊಂಡಿದ್ದ ಈ ಶಿವಾಚಾರ್ಯ (ಶುದ್ಧಶೈವ) ಸಂಪ್ರದಾಯವನ್ನು ತಿರಸ್ಕರಿಸಿ, ದೇಶೀ ನೆಲೆಯ ನಾಥಸಂಪ್ರದಾಯವನ್ನು ಪರಿಷ್ಕರಿಸಿ, ಬಸವಣ್ಣನು ಹೊಸ ಶರಣಧರ್ಮವನ್ನು ಹುಟ್ಟು ಹಾಕಿದನೇನೋ ಎನಿಸುತ್ತದೆ. "ಬಸವಣ್ಣನವರು ತಮ್ಮ ಈ ಭಕ್ತಿಪಂಥವನ್ನು ಪ್ರಚುರಪಡಿಸಲು ಪ್ರೇರಣೆಯನ್ನು ಪಡೆದುದಾದರೂ ಹುಟ್ಟಿನಿಂದ ಕುಲಹೀನರಾದರೂ.... ಗುಣಮಟ್ಟದಿಂದ ಕುಲೀನರೂ ಮಾನ್ಯರೂ ಆದ ಡೋಹಾರ ಜಾತಿಯ ಕಕ್ಕಯ್ಯನಿಂದ, ಮಾದಾರ ಜಾತಿಯ ಚೆನ್ನಯ್ಯನಿಂದ ಮತ್ತು ಜೇಡರ ಜಾತಿಯ ದಾಸಯ್ಯನಿಂದ" ಎಂದು ಎಲ್. ಬಸವರಾಜು ಹೇಳಿದುದನ್ನು ಇಲ್ಲಿ ನೆನೆಯಬಹುದು.*

**ಶುದ್ಧಶೈವರ ಮತಾಂತರ :**

ಎಂದೋ ಮಾಯವಾದ ಬೌದ್ಧವನ್ನು ಬಿಟ್ಟರೆ, ಕರ್ನಾಟಕದ ಧರ್ಮಗಳು ವೈದಿಕ ಶೈವ, ಆಗಮಿಕ ಶೈವ, ಜೈನ ಮತ್ತು ವೀರಶೈವ (ಶರಣಧರ್ಮ). ಇವುಗಳಲ್ಲಿ ವರ್ಣಾಶ್ರಮವನ್ನು ಒಪ್ಪಿಕೊಂಡಿದ್ದ ವೈದಿಕ ಶೈವವು ಅನ್ಯಜಾತಿಯವರಿಗೆ ಮತಾಂತರದೀಕ್ಷೆ ಏಕೆ ಮಂತ್ರದೀಕ್ಷೆಯನ್ನೂ ಕೊಡುತ್ತಿರಲಿಲ್ಲ. ಆಗಮಿಕ ಶೈವ, ಜೈನ ಧರ್ಮಗಳು ಬ್ರಾಹ್ಮಣರಿಗೆ ಮತಾಂತರ ದೀಕ್ಷೆ, ಆ ಬ್ರಾಹ್ಮಣರಿಗೆ ಮಂತ್ರದೀಕ್ಷೆ ಕೊಡುತ್ತಿದ್ದವು. ಇಂಥ ಸಂದರ್ಭದಲ್ಲಿ ಬಸವಣ್ಣ ಹುಟ್ಟಿ ಬಂದು ಮಂತ್ರವನ್ನೂ ಕೊಡುವ, ಮತಾಂತರವನ್ನೂ ಮಾಡಿಕೊಳ್ಳುವ ಹೊಸಧರ್ಮವನ್ನು ಹುಟ್ಟುಹಾಕಿದನು. ಈಗ ಕೆಳವರ್ಣದವರಂತೂ ಸರಿಯೇ, ಮೇಲುವರ್ಣದ ಉದಾರವಾದಿ ವ್ಯಕ್ತಿಗಳೂ ದೊಡ್ಡಪ್ರಮಾಣದಲ್ಲಿ ಈ ಹೊಸಧರ್ಮವನ್ನು ಅಂಗೀಕರಿಸಿದರು. ಒಂದುವೇಳೆ ಈ ಮೊದಲು ಶೈವಧರ್ಮದಲ್ಲಿ (ಮತಾಂತರ) ದೀಕ್ಷೆ ಹೊಂದಿದ್ದ ಬ್ರಾಹ್ಮಣರು, (ವಿಭೂತಿಪಟ್ಟ) ದೀಕ್ಷೆಹೊಂದಿದ್ದ ಅಬ್ರಾಹ್ಮಣರು ಶರಣಧರ್ಮ (ವೀರಶೈವ)ಕ್ಕೆ ಬರುವಾಗ ಇನ್ನೊಮ್ಮೆ ದೀಕ್ಷೆ ಪಡೆಯಬೇಕೆ? ಬೇಡವೆ? ಎಂಬ ಪ್ರಶ್ನೆ ಆ ಕಾಲದಲ್ಲಿ ಉದ್ಭವಿಸಿತು. "ಶೈವಗುರುವಿನ ಕೈಯಲ್ಲಿ ದೀಕ್ಷೆಯಾದಡೇನಯ್ಯ? ಅಲ್ಲಿ ಏನೂ ಊನಯವಿಲ್ಲ". (ಉಳಿಯುಮೇಶ್ವರ ಚಿಕ್ಕಯ್ಯ). "ಶೈವ ಗುರುವಿನ ಕೈಯ ಲಿಂಗಸಾಹಿತ್ಯವಾದಡೇನಯ್ಯಾ? ವೀರಶೈವ ಶರಣರು ಮೆಚ್ಚರು" (ಚೆ.ಬ. ೪೫೩) ಎಂಬ ಭಿನ್ನ ವಾದಗಳು ಹುಟ್ಟಿದವು. ಅದಕ್ಕಾಗಿಯೇ "... ಪೂರ್ವದ ಜಡಶೈವ ಮಾರ್ಗವ ಬಿಡಿಸಿ, ನಿಜವೀರಶೈವ ದೀಕ್ಷೆಯನೇ

---

* ದೇವರ ದಾಸಿಮಯ್ಯನ ವಚನಗಳು ಸಂ. - ಎಲ್. ಬಸವರಾಜು ಪೀಠಿಕೆ ೬

ಇತ್ತು" ಎಂದು ಚೆನ್ನಬಸವಣ್ಣ ಹೇಳುವುದು (೭೧೬). ಇಂಥ ಪರಿಸ್ಥಿತಿ ಕಾರಣವಾಗಿ "ಪುನರ್ದೀಕ್ಷೆ" ಎಂಬ ಪಾರಿಭಾಷಿಕ ಪದ ಅಂದಿನ ಲಿಂಗಾಯತ ಸಮಾಜದಲ್ಲಿ ಹುಟ್ಟಿಕೊಂಡಿತು. ಕವಿ ಶಂಕರದೇವ 'ಪುನರ್ದೀಕ್ಷಾ ರಗಳೆ' ಬರೆದಿದ್ದು, ಅಲ್ಲಿ ಆಗಮಿಕಶೈವ ಮತ್ತು ವೈದಿಕಶೈವರಿಗೆ ನೀಡುವ ಪುನರ್ದೀಕ್ಷೆಯ ಮಹತ್ವವನ್ನು

ಶಾಪಹತ ಶೈವೋಪದೇಶಾವಲೋಹಮಂ
ಲೋಪಿಸುವ ಸತ್ಯಸಂಧಾನದ ಪುನರ್ದೀಕ್ಷೆ

ಕಾಪುರುಷ ವೈದಿಕಾನುಗ್ರಹದ ತಮವನಪ
ಲಾಪಿಸುವ ಭಾಸ್ಕರ ಸಮಾನದ ಪುನರ್ದೀಕ್ಷೆ

ಎಂದು ಸೂಚಿಸುತ್ತಾನೆ. ಇದಲ್ಲದೆ ಆಗಮಿಕ ಶೈವವನ್ನೇ ಕುರಿತು ಈ ರಗಳೆಯಲ್ಲಿ ಹೇಳಿದ ಮಾತುಗಳು ಹೀಗಿವೆ:

ಮಣೆಯ ಮೇಲಣ ಶಿಲೆಯನನವರತ ಪೂಜಿಸುವ
ಬಣಗು ಶೈವೋಪದೇಶಾಂತಕ ಪುನರ್ದೀಕ್ಷೆ
ಮೂಢತನದಿಂ ಲಿಂಗಮಂ ಶೈವವಿಪ್ರನಿಂ
ಬೇಡಿಕೊಂಬುದು ಪೊಲ್ಲವೆನುತಿಹ ಪುನರ್ದೀಕ್ಷೆ
ಲಿಂಗವೇ ಗುರುವೆಂದು ಪಾಣಿವಟ್ಟದೊಳಿರಿಸಿ
ಲಿಂಗವಂ ಧರಿಸಿದವಗೊಲಿಯದ ಪುನರ್ದೀಕ್ಷೆ

ಹೀಗೆ, ಪುನರ್‌ದೀಕ್ಷೆ ಪಡೆದು ಶರಣನಾಗುವುದು ಮಿಕ್ಕ ವೈದಿಕಶೈವ, ಜೈನಗಳಿಗಿಂತ ಶಿವಪರವಾದ ಈ ಶುದ್ಧಶೈವರಿಗೆ ಹೆಚ್ಚು ಸುಲಭವೆನಿಸಿತು. ಇನ್ನೂ ವಿಶೇಷವೆಂದರೆ, ಶರಣಧರ್ಮವೆನ್ನುವುದು ಮೂಲತಃ ತಮ್ಮ ಶುದ್ಧಶೈವ ಬ್ರಾಹ್ಮಣ ನೆಲೆಯವನೇ ಆಗಿದ್ದ ಬಸವಣ್ಣ ಸ್ಥಾಪಿಸಿದ್ದುದು. ಹೀಗಾಗಿ ಆ ಕಾಲದ ಆಗಮಿಕ ಶೈವಗಳಾದ ಪಾಶುಪತ, ನಕುಲೀಶ, ಮಹಾವ್ರತ ಶೈವಧರ್ಮಿಯರೂ, ಇವರಿಗಿಂತ ಶ್ರೋತ್ರೀಯ (ಶುದ್ಧ)ಶೈವೀಯರೂ ದೊಡ್ಡಪ್ರಮಾಣದಲ್ಲಿ ಬಸವಧರ್ಮಕ್ಕೆ ಮತಾಂತರಗೊಂಡರು. ಈ ವಿಷಯವಾಗಿ ಭೀಮಕವಿಯ ಬಸವಪುರಾಣ (ತೆಲುಗು ಬಸವಪುರಾಣ)ತೀವ್ರ ಗಮನ ಸೆಳೆಯುತ್ತದೆ. ಈ ಕೃತಿಯ ಲನೆಯ ಕಾಂಡ ೫೭ ಸಂಧಿ ಇಡಿಯಾಗಿ "ಶೈವದೀಕ್ಷಾಚಾರ್ಯರ ಮತಾಂತರ" ವನ್ನೊಳಗೊಂಡಿದೆ. ಈ ಸಂಧಿಯ ಸೂಚನಾ ಪದ್ಯ ಹೀಗಿದೆ:

ಶೈವದೀಕ್ಷಾಚಾರ್ಯರೆಲ್ಲರು
ತಾವು ಲಿಂಗೈಕ್ಯರುಗಳಂ ಕಂ
ಡಾವಗಂ ಶಿವನ ಪ್ರಸಾದವನನುಭವಿಸುತಿರಲು||

ಇಲ್ಲಿ ಅನ್ಯರನ್ನು "ಶೈವದೀಕ್ಷಾಚಾರ್ಯ" ಎಂದು, ಶರಣರನ್ನು "ಲಿಂಗೈಕ್ಯರು" ಎಂದು ಬಿಡಿಸಿ ಕರೆದುದನ್ನು ಅವಶ್ಯ ಗಮನಿಸಬೇಕು. ಅನ್ಯರಾದ ಶೈವದೀಕ್ಷಾಚಾರ್ಯರು ಲಿಂಗೈಕ್ಯರನ್ನು

ಕಂಡು (ಮತಾಂತರಗೊಂಡು), ಶಿವನ ಪ್ರಸಾದವನ್ನು ಸೇವಿಸುತ್ತಿದ್ದರೆಂದು ಈ ಸೂಚನಾಪದ್ಯ ಹೇಳುತ್ತದೆ. ಬಳಿಕ ಈ ಸಂಧಿಯ ಪೂರ್ವಾರ್ಧದಲ್ಲಿ ಕಲ್ಯಾಣದಲ್ಲಿ ಸಮಾವೇಶಗೊಂಡಿದ್ದ ಮಡಿವಾಳಮಾಚಯ್ಯ, ಸೊಡ್ಡಳ ಬಾಚರಸ, ನುಲಿಯಚಂದಯ್ಯ, ಮೇದರ ಕೇತಿದೇವ ಮೊದಲಾದ ಶರಣರನ್ನು ಹೆಸರಿಸಿ,ಆಮೇಲೆ

ಸೇವಕರು ಮಂತ್ರಪ್ರಕರ ದೀ
ಕ್ಷಾವಿಧಜ್ಞರು ಪೂಜನಾರ್ತರು
ಶೈವ ಪಾಶುಪತಾದಿ ಶಾಸನಧಾರಕರು ಬಂದು।
ತಾವು ತಮತಮಗೆಲ್ಲರುಂ ಮನ
ವೋವಿ ಲಿಂಗೈಕ್ಯರುಗಳಂ ಕಂ
ಡಾವಗಂ ತಮತಮಗೆ ಲಿಂಗೈಕ್ಯರುಗಳಾಗಿ....॥ (೫೭-೧೫)

ಅಂದರೆ ಸೇವಕರಲ್ಲದೆ ಮಂತ್ರಪ್ರಕರ ದೀಕ್ಷಾವಿಧಜ್ಞರು, ಪೂಜನಾರ್ತರು, ಶೈವ, ಪಾಶುಪತಾದಿ ಶಾಸನಧಾರಕರು ಬಂದು, ಮನಃಪೂರ್ವಕ ಲಿಂಗೈಕ್ಯ (ಶರಣಧರ್ಮೀಯ)ರಾದರೆಂದು ಇಲ್ಲಿ ಹೇಳಲಾಗಿದೆ. ಮುಂದುವರಿದು, ಹೀಗೆ ಶರಣಧರ್ಮ ಸೇರಿದ ವ್ಯಕ್ತಿಗಳಲ್ಲಿ, -ರಾಸಿ, -ಜೀಯ, -ಶಕ್ತಿ ಶಬ್ದಗಳಿಂದ ಅಂತ್ಯಗೊಳ್ಳುವ ಪಾಶುಪತ ನಕುಲೀಶರನ್ನು, ವ್ರತಿ ಶಬ್ದದಿಂದ ಅಂತ್ಯಗೊಳ್ಳುವ ಮಹಾವ್ರತಿಗಳನ್ನು ಹೆಸರಿಸದೆ, -ಶಿವ ಶಬ್ದದಿಂದ ಅಂತ್ಯಗೊಳ್ಳುವ ಶೈವರ ಹೆಸರುಗಳನ್ನು ಮಾತ್ರ ಧರ್ಮಶಿವ, ಲೋಕೇಶ್ವರಶಿವ, ಶ್ರೀಕಂಠಶಿವ, ಈಶ್ವರಶಿವ, ಬ್ರಹ್ಮಶಿವ, ಶಂಕರಶಿವ, ಸರ್ವಜ್ಞಶಿವ, ಜ್ಞಾನಶಿವ, ಈಶಾನಶಿವ, ಅಘೋರಶಿವ, ಚಂದ್ರಶೇಖರಶಿವ, ಭಾನುಶಿವ, ವಾಮಶಿವ, ವಿಮಳಶಿವ, ವೇದಾಂತಶಿವ, ಆಗಮಶಿವ, ವಿಶ್ವೇಶಶಿವ, ಅಮೃತಶಿವ, ಸೋಮಶಿವ, ತ್ರಿಪುರಾಂತಶಿವ, ಕಮಲಶಿವ (೫೭-೧೭ ರಿಂದ ೧೯) ಇತ್ಯಾದಿಯಾಗಿ ಹೇಳಲಾಗಿದೆ. ಈ ಹೆಸರುಗಳನ್ನು ನೋಡಿದರೆ (ಶುದ್ಧ)ಶೈವರು ದೊಡ್ಡ ಪ್ರಮಾಣದಲ್ಲಿ ಶರಣಧರ್ಮ ಸೇರಿಕೊಂಡರೆನಿಸುತ್ತದೆ. ಈ ಮುಂದೆ ಇದೇ ರೀತಿ ಕೆರೆಯಪದ್ಮರಸ, ಕುಮಾರಪದ್ಮರಸ, ಹರಿಹರ, ರಾಘವಾಂಕ, ನಾಗನಾಥಾಚಾರ್ಯ, ಜಗದಾರಾಧ್ಯ ನಾಗಿದೇವ, ಮಗ್ಗೆಯ ಮಾಯಿದೇವ, ಮಹಾಲಿಂಗದೇವ, ಜಕ್ಕಣಾರ್ಯ ಮೊದಲಾದವರೋ ಇವರ ಪೂರ್ವಜರೋ ಮತಾಂತರಗೊಂಡರೆಂದು ಹೇಳಬಹುದು. ಇಷ್ಟೇ ಏಕೆ, ೧೬ನೆಯ ಶತಮಾನದ ಗುಬ್ಬಿಯ ಮಲ್ಲಣ್ಣ ಮೊದಲಾದ ಆರಾಧ್ಯ ವಿದ್ವಾಂಸರ ಪೂರ್ವಜರು ಈ ಶುದ್ಧಶೈವರೇ ಆಗಿರಬಹುದು.

**ಮತಾಂತರಗೊಂಡ ಶುದ್ಧಶೈವಬ್ರಾಹ್ಮಣರು ಈಗ ಯಾರು?:**

ಬಸವಣ್ಣನವರು 'ಶಿವಭಕ್ತಿಯುಂ ಕರ್ಮಮುಂ ಎಂದುಂ ಒಂದಾಗಿರವು" ಎಂದು ನುಡಿದು, ಮನೆ ತೊರೆದರೆಂದು ಹರಿಹರ ಹೇಳುತ್ತಾನೆ. ಈ ವಾಕ್ಯವನ್ನು ಬಿಡಿಸಿ ನೋಡಿದರೆ, ಮಾದಿರಾಜನದು ಭಕ್ತಿ ಮತ್ತು ಕರ್ಮಗಳನ್ನು ಬಾಳುತ್ತಲಿದ್ದ ಕುಟುಂಬವೆನಿಸುತ್ತದೆ. ಇದು ಶುದ್ಧಶೈವದ ಲಕ್ಷಣವಾಗಿರಬಹುದು. ಹಾಗೆಯೇ ಸ್ವಲ್ಪ ಹೆಚ್ಚು ಕಡಿಮೆ ಇದರ ಸೋದರ ಧರ್ಮಗಳಾದ ಪಾಶುಪತ, ನಕುಲೀಶ, ಮಹಾವ್ರತಿಗಳ ಲಕ್ಷಣವೂ ಆಗಿರಬಹುದು.

ಚೆನ್ನಬಸವಣ್ಣನು "ಶೈವ ಸೈವೆರಗಾದ, ಪಾಶುಪತಿ ಪಥವಸರಿಯ, ಕಾಳಾಮುಖಿ ಕಂಗೆಟ್ಟ, ಮಹಾವ್ರತಿ ಮದವೇರಿದ" ಎಂದು ತೆಗಳುವುದನ್ನು ನೋಡಿದರೆ, ಈ (ಶುದ್ಧ)ಶೈವವನ್ನು ನಿರಾಕರಿಸಿ, ಬಸವಣ್ಣ ಭಿನ್ನಧರ್ಮವನ್ನು ಹುಟ್ಟುಹಾಕಿದನೆಂದು ಸ್ಪಷ್ಟವಾಗುತ್ತದೆ. ಈ ಹೊಸಧರ್ಮ ಹೆಚ್ಚು ಜನಪ್ರಿಯವಾಗುತ್ತಲೇ ಇದರಲ್ಲಿ ಮೇಲೆ ಹೇಳಿದ ನಾಲ್ಕು ಶೈವಗಳು, ವಿಶೇಷವಾಗಿ (ಶುದ್ಧ) ಶೈವವು ಲೀನವಾಗತೊಡಗಿತೆಂದು ಬಸವಪುರಾಣದಲ್ಲಿ ಬರುವ "ಶೈವ ದೀಕ್ಷಾಚಾರ್ಯರ ಮತಾಂತರ" ಪ್ರಸಂಗ ತಿಳಿಸುತ್ತದೆ. ಸ್ಥಾವರಲಿಂಗದ ಪ್ರತೀಕರಾಗಿದ್ದ ಮತ್ತು ಮಣೆಯ ಮೇಲಿಟ್ಟು ಪೂಜಿಸುತ್ತಿದ್ದ ಲಿಂಗವನ್ನು ಜೊತೆಗೆ ಜನ್ನಿವಾರವನ್ನೂ ಹೊಂದಿದ್ದ ಈ ಶುದ್ಧಶೈವಬ್ರಾಹ್ಮಣರು ಮತಾಂತರವಾಗುತ್ತ ಹೀಗೆ ನಾಲ್ಕು ನೆಲೆಗಳಲ್ಲಿ ಹಂಚಿಹೋದರು:

೧. ಕೆಲವರು ಜನ್ನಿವಾರ ಬಿಟ್ಟು ಜನಪ್ರಿಯ ಶರಣಧರ್ಮದಲ್ಲಿ ಸೇರಿ, ಉತ್ತರಕರ್ನಾಟಕದಲ್ಲಿ ಜಂಗಮರೆನಿಸಿದರು. ಹಳ್ಳಿಗಳಲ್ಲಿ ಜಂಗಮರನ್ನು ಮೂಲತಃ ಬ್ರಾಹ್ಮಣರೆಂದು ಹೇಳುತ್ತಿರುವುದು, ಈ ಅರ್ಥದಲ್ಲಿ

೨. ಇನ್ನು ಕೆಲವರು ಲಿಂಗವನ್ನು ಬಿಟ್ಟು ಪ್ರತಿಷ್ಠಿತ ವೈದಿಕ ಅದ್ವೈತಶೈವ (ಸ್ಮಾರ್ತ) ಬ್ರಾಹ್ಮಣಧರ್ಮದಲ್ಲಿ ಸೇರಿದರು. ಮೂಲತಃ ಶುದ್ಧಶೈವ ಬ್ರಾಹ್ಮಣರಾಗಿದ್ದ ಬಸವಣ್ಣನವರ ವಂಶಜರು ಮತಾಂತರ ಹೊಂದಿ, ಇಂದು ಬಾಗೇವಾಡಿಯಲ್ಲಿ ವೈದಿಕ ಅದ್ವೈತ ಶೈವ ಬ್ರಾಹ್ಮಣ (ಸ್ಮಾರ್ತ)ರಾಗಿರುವುದೇ ಇದಕ್ಕೆ ಸಾಕ್ಷಿ.

೩. ಮೈಸೂರು ಕರ್ನಾಟಕದಲ್ಲಿ ಕೆಲವರು ಜನ್ನಿವಾರ ಬಿಟ್ಟು, ಲಿಂಗವನ್ನು ಉಳಿಸಿಕೊಂಡು ಆರಾಧ್ಯಜಂಗಮರೆನಿಸಿದರು.

೪. ಅದೇ ಪ್ರದೇಶದಲ್ಲಿ ಇನ್ನು ಕೆಲವರು ಏನೂ ವ್ಯತ್ಯಾಸ ಮಾಡಿಕೊಳ್ಳದೆ ಅಂದರೆ ಜನ್ನಿವಾರ, ಲಿಂಗ ಎರಡನ್ನೂ ಇಟ್ಟುಕೊಂಡು ಆರಾಧ್ಯಬ್ರಾಹ್ಮಣ ಹೆಸರಿನಿಂದ ಮುಂದುವರಿದರು. ಇಂದು ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿರುವ ಈ ಆರಾಧ್ಯಬ್ರಾಹ್ಮಣರು ಮೂಲ ಲಿಂಗೋದ್ಭವ ಪಂಚಾಚಾರ್ಯರನ್ನು ಪೂಜಿಸುತ್ತಾರೆ. ಏಕೆಂದರೆ ಅವರಿಗೆ ಜನ್ನಿವಾರವಿದೆ. ಆದರೆ ಜನ್ನಿವಾರ ಬಿಟ್ಟು ಲಿಂಗ ಉಳಿಸಿಕೊಂಡಿರುವ ಪಂಚಪೀಠದ ಜಗದ್ಗುರುಗಳನ್ನು ಮನ್ನಿಸುವುದಿಲ್ಲ. ಲಿಂಗಾಯತರ ಮನೆಯಲ್ಲಿ ಊಟಮಾಡುವುದಿಲ್ಲ. ವೀರಶೈವ ಜಂಗಮರು ಹೇಳುವ ನಂದಿ, ಭೃಂಗಿಗಳಿಗೆ ಬದಲು ಭಾರದ್ವಾಜ, ಸಾಂಖ್ಯಾಯನ ಇತ್ಯಾದಿ ಬ್ರಾಹ್ಮಣ ಗೋತ್ರಗಳನ್ನು ಹೇಳುತ್ತಾರೆ. ಒಟ್ಟಾರೆ, ಇಂದಿನ ಮೈಸೂರು, ಪ್ರದೇಶದ ಈ ಆರಾಧ್ಯ ಬ್ರಾಹ್ಮಣರೇ ಮಾದಿರಾಜನ ಪರಂಪರೆಯವರಾಗಿದ್ದಾರೆ.

ಹೀಗೆ ಶುದ್ಧಶೈವರು, ಮೇಲೆ ಹೇಳಿದಂತೆ ಮೊದಲಿನ ಮೂರು ಪ್ರಕಾರಗಳಲ್ಲಿ ಒಳಗೆ ಬಂದು, ೧೩-೧೪ನೆಯ ಶತಮಾನಗಳ ಮಧ್ಯದಲ್ಲಿ ಶರಣಧರ್ಮವನ್ನು 'ವೀರಶೈವ' ಹೆಸರಿನಿಂದ ಕರೆದು, ಶರಣತತ್ವಗಳನ್ನು ಶೈವೀಕರಿಸಿದರು. ಮುಂದೆ ಶಂಕರ ರಾಮಾನುಜರಂತೆ ಪ್ರಸ್ಥಾನತ್ರಯಕ್ಕೆ ವೀರಶೈವ ಪರವಾಗಿ 'ಶ್ರೀಕಂಠಭಾಷ್ಯ' 'ಶ್ರೀಕರ ಭಾಷ್ಯ' ಬರೆದು ಶರಣಸಿದ್ಧಾಂತವನ್ನು ಇನ್ನಷ್ಟು ವೇದಮುಖಿಯಾಗಿಸಿದರು.

ಒಟ್ಟಾರೆ, ತಂದೆ ಮಾದಿರಾಜನ ಸಂಪ್ರದಾಯದ ಈ ಆಗಮಿಕ ಶೈವಬ್ರಾಹ್ಮಣರು, ಮುಂದಿನ ದಿನಗಳಲ್ಲಿ ಮಗ ಬಸವಣ್ಣನ ಲಿಂಗಾಯತಕ್ಕೆ-ಪಂಚಾಚಾರ್ಯ ಹೆಸರಿನಿಂದ-ವಾರಸುದಾರಿಕೆ ಸಾಧಿಸುತ್ತ ಬಂದರು.

■■

# ತಮಿಳುನಾಡಿನಲ್ಲಿ ಶೈವಧರ್ಮದ ಗೋಳಕಿ ಪಂಥ

ಮೂಲ ಇಂಗ್ಲಿಷ್ : ಬಿ.ಜಿ.ಎಲ್. ಸ್ವಾಮಿ
ಕನ್ನಡಕ್ಕೆ : ಸಿ.ಆರ್. ಯರವಿನತೆಲಿಮಠ

**ಪೀಠಿಕೆ**

ಸಾಮಾನ್ಯವಾಗಿ ಶೈವಧರ್ಮವೆಂದರೆ ಅನೇಕ ಪಂಥ-ಉಪಪಂಥಗಳಿಂದ ಕೂಡಿದ ಸರ್ವಸಾಮಾನ್ಯ ಧರ್ಮವಾಗಿರುತ್ತದೆ. ಈ ಪಂಥ-ಉಪಪಂಥಗಳಲ್ಲಿ ಕೆಲವು ಹೆಚ್ಚು, ಕೆಲವು ಕಡಿಮೆ, ಕೆಲವು ತೀರ ಕಡಿಮೆ ಪರಿಚಿತವಿರುತ್ತವೆ. ಇವುಗಳಲ್ಲಿ ಒಂದಿಷ್ಟು ಪಂಥಗಳು ಇತಿಹಾಸದ ವಿವಿಧ ಘಟ್ಟಗಳಲ್ಲಿ ಹೆಚ್ಚು ಕಡಿಮೆ ಜನಪ್ರಿಯತೆ ಮತ್ತು ಗೌರವ ಪಡೆದವು. ಕೆಲವು ರಾಜಾಶ್ರಯವಿರುವಾಗ ಉಚ್ಛ್ರಾಯ ಸ್ಥಿತಿಯಲ್ಲಿದ್ದು, ಅದು ತಪ್ಪಿದಾಗ ಅವಸಾನ ಹೊಂದಿದವು. ಕೆಲವು ಜನಸಾಮಾನ್ಯರ ಅನುಸರಣೆ ಮತ್ತು ಆಶ್ರಯದಿಂದ ಅಭಿವೃದ್ಧಿ ಹೊಂದಿದ ಬಗೆಗೆ ಉಲ್ಲೇಖಗಳೂ ಉಂಟು. ಅವುಗಳಲ್ಲಿ ಬಹಳಷ್ಟು ತಮ್ಮ ಬೆಳವಣಿಗೆಯ ಒಂದಿಲ್ಲೊಂದು ಹಂತದಲ್ಲಿ ಮಾರ್ಪಾಡಾದವು, ಆಚರಣೆ ಮತ್ತು ತಾತ್ವಿಕತೆ ಈ ಎರಡರಲ್ಲಿಯೂ ದಾರಿತಪ್ಪಿದವು ಮತ್ತು ಪ್ರಕ್ಷಿಪ್ತ ವಿಷಯಗಳು ಒಳಸೇರಲು ಅವಕಾಶ ಮಾಡಿಕೊಟ್ಟವು. ಕೆಲವು ಉದಾರನೀತಿಯನ್ನು ಅನುಸರಿಸಿದರೆ ಮತ್ತೆ ಕೆಲವು ಬರಬರುತ್ತ ನಿಷ್ಠುರನೀತಿಯನ್ನು ಅನುಸರಿಸಿದವು. ಉಳಿದ ಸಮಕಾಲೀನ ಪಂಥಗಳೊಂದಿಗೆ ಪ್ರತಿಕ್ರಿಯಿಸುವುದರಿಂದಾಗಿ ಅನೇಕ ಶೈವಪಂಥಗಳ ಬಣ್ಣ ಮತ್ತು ಛಾಯೆ ಬದಲಾಗುತ್ತಲೇ ಬಂದಿತು. ಹಲವು ಹೊಸ ಪಂಥ ಇಲ್ಲವೆ ಉಪಪಂಥಗಳು ಹುಟ್ಟಿದ ಉದಾಹರಣೆಗಳಿರುವಂತೆ, ಒಂದು ಪಂಥ ಮತ್ತೊಂದರಲ್ಲಿ ಸಂಪೂರ್ಣ ಲೀನವಾದ ಉದಾಹರಣೆಗಳೂ ಇರುತ್ತವೆ.

ಈ ಸಾಮಾನ್ಯ ಬೆಳವಣಿಗೆಗಳಿಗೆ ೬ನೇ ಶತಮಾನದಿಂದ ಪ್ರಾರಂಭವಾದ ತಮಿಳುನಾಡಿನ ಶೈವಧರ್ಮದ ಸುದೀರ್ಘ ಇತಿಹಾಸ ಅಪವಾದವಲ್ಲ. ಗೋಲಕಿಪಂಥದ ಶೈವವು ೧೦ನೇ ಶತಮಾನದಲ್ಲಿ ತಮಿಳುನಾಡನ್ನು ಪ್ರವೇಶಿಸಿದ ಪ್ರಮುಖ ಧಾರ್ಮಿಕ ಅಲೆಗಳಲ್ಲಿ ಒಂದು. ಇದರ ಗತವೈಭವದ ಇತಿಹಾಸವನ್ನು ಪುನಃ ಜ್ಞಾಪಿಸಿಕೊಳ್ಳುವ ಯತ್ನವನ್ನು ಮುಂದಿನ ಪುಟಗಳಲ್ಲಿ ಮಾಡಲಾಗಿದೆ.

ಈ ಅಧ್ಯಯನಕ್ಕೆ ಬಳಸಲಾದ ಬಹುಪಾಲು ಮೂಲ ಆಕರಗಳನ್ನು Archaeological Survey of Indiaದ ಶಾಸನಗಳ ವಾರ್ಷಿಕ ವರದಿಗಳಲ್ಲಿಯ ಶಾಸನ ಸಾರಾಂಶದಿಂದ ಪಡೆಯಲಾಗಿದೆ. ಹೀಗಿದ್ದೂ ಅಂಕಿ ಸಂಖ್ಯೆಗಳ ಕೆಲವು ಮಾಹಿತಿಯನ್ನು ಪ್ರಕಟಿತ ಶಾಸನಗಳ ಪೂರ್ಣಪಠ್ಯಗಳಿಂದ ಪಡೆಯಲಾಗಿದೆ. ಇನ್ನು ಪ್ರಕಟವಾಗಬೇಕಿರುವ ಶಾಸನಗಳು ಅಧಿಕಪ್ರಮಾಣದಲ್ಲಿರುವುದರಿಂದ, ಇವು ಪೂರೈಸುವುದು ಒಟ್ಟು ಶಾಸನಗಳ ಅಲ್ಪಾಂಶವನ್ನು ಮಾತ್ರ. ಆದ್ದರಿಂದ ಈ ಅಧ್ಯಯನದಲ್ಲಿರುವ ವಿಚಾರಗಳು ತಾತ್ಕಾಲಿಕವೆಂದು ತಿಳಿಯುವುದು ಅತ್ಯವಶ್ಯ.

ಈ ಮೊದಲು ಹಲವು ಲೇಖಕರು ತಮಿಳುನಾಡಿನ ಗೋಳಕಿಮಠಗಳ ಬಗ್ಗೆ ಕೆಲವು ಮಾಹಿತಿ ಬೆಳಕಿಗೆ ತಂದಿದ್ದಾರೆ. ಇವರಲ್ಲಿ ಮೊದಲ ವರ್ಗ ಸರಕಾರಿ ಶಾಸನತಜ್ಞರು. ಇವರು ಪ್ರತಿವರ್ಷ ಸಂಗ್ರಹಿಸಿದ ಶಾಸನ ಮಾಹಿತಿಯನ್ನು ತಪ್ಪದೇ ವಾರ್ಷಿಕ ವರದಿಗಳ ಎರಡನೆಯ ಭಾಗದಲ್ಲಿ ಪ್ರಕಟಿಸಿದ್ದಾರೆ. ಮಿಕ್ಕವರು ಶಾಸನೋಕ್ತ ಬೇರೆ ವಿಷಯಗಳ ಬಗ್ಗೆ ಪ್ರಥಮ ಆಸಕ್ತಿವಹಿಸಿ, ಈ ವಿಷಯವನ್ನು ಲಘುವಾಗಿ ಪರಿಗಣಿಸುತ್ತಾರೆ. ಲೋಕನಾಯಕಿ ನನ್ನಿತ್ತಂಬಿ ಮತ್ತು ಗುರುಮೂರ್ತಿ (೧೯೭೦) ಅವರು ತಮ್ಮ ಪ್ರಬಂಧಗಳಲ್ಲಿ ಗೋಲಕಿ ಸಂಸ್ಥೆಗಳ ಶಿಕ್ಷಣ ವ್ಯವಸ್ಥೆಯನ್ನು ಕುರಿತು ಪ್ರತಿಪಾದಿಸಿದ್ದಾರೆ. History of Saivism in the Tamil Country (ರಾಜಮನಿಕ್ಕಮ್, ೧೯೫೮, ೧೯೬೨)ದಲ್ಲಿ ಕೆಲವು ಪುಟಗಳನ್ನು ಗೋಲಕಿಮಠಗಳ ಸಂಕ್ಷಿಪ್ತ ಇತಿಹಾಸಕ್ಕೆ ಮೀಸಲಿಡಲಾಗಿದೆ. ವೆಂಕಟರಾಮಯ್ಯ ಮತ್ತು ಸೋಮಶೇಖರ ಶರ್ಮ (೧೯೬೦) ಅವರು ಗೋಳಕಿ ಮಠಗಳು ಮತ್ತು ಅವುಗಳ ಆಚಾರ್ಯರನ್ನು ಕುರಿತು ಬರೆದಿದ್ದು, ಮಹಾಲಿಂಗಮ್ ಅವರ (೧೯೬೨)ಗೋಳಕಿಮಠದ ಸಂಕ್ಷಿಪ್ತ ಇತಿಹಾಸವನ್ನೊಳಗೊಂಡ 'ಗೋಳಕಿಮಠ' ಹೆಸರಿನ ಗ್ರಂಥವು ಮುಖ್ಯವಾಗಿ ಈ ಮಠದ ಉಗಮದ ಮಾಹಿತಿಯನ್ನು ಕೊಡುತ್ತದೆ.

## ಗೋಳಕಿ ಸಂಪ್ರದಾಯ

### ಅ.ಆಂಧ್ರಪ್ರದೇಶ

ತೆಲುಗುದೇಶದಲ್ಲಿ ಲಕ್ಷಾಧ್ಯಾಯಿ ಸಂಪ್ರದಾಯವು ಗೋಲಕಿಪಂಥದ ಮುಖ್ಯವಾಹಿನಿಯಾಗಿ ಮುಂದುವರಿದಿದೆ. ಬಳಕೆಯಲ್ಲಿರುವ ಲಕ್ಷಾಧ್ಯಾಯಿ ಸಂಪ್ರದಾಯ ಮತ್ತು ಭಿಕ್ಷಾಮಠ ಸಂಪ್ರದಾಯ ಒಂದೇ ಅರ್ಥ ಹೊಂದಿರುತ್ತವೆ. ಕ್ರಿ.ಶ. ೧೨೬೧ರಲ್ಲಿ ಬರೆಯಲಾದ ಮಲ್ಕಾಪುರಮ್ ಶಾಸನವು (ಪ೧೧, x ನಂ.೩೯೫,ರಾಮಯ್ಯ ಪಂತಲು, ೧೯೩೦) ದೂರ್ವಾಸನಿಂದ ಪ್ರಾರಂಭವಾಗುವ ಆಚಾರ್ಯರ ವಂಶಕ್ಕೆ ಸೇರಿದ ಸದ್ಭಾವಶಂಭುಶಿವಾಚಾರ್ಯನು ಡಹಳಮಂಡಲ (ಭಾಗೀರಥಿ ಮತ್ತು ನರ್ಮದಾ ನದಿಗಳ ನಡುವಿನ ಪ್ರದೇಶ)ವನ್ನು ಆಳುತ್ತಿದ್ದ ಕಲಚೂರಿ ಮನೆತನದ ಅರಸು ಮೊದಲನೆಯ ಯುವರಾಜದೇವ (ಕ್ರಿ.ಶ. ೯೧೫-೯೪೫) ನಿಂದ ಮೂರು ಲಕ್ಷ ಪ್ರದೇಶವನ್ನು ದಾನವಾಗಿ

ಪಡೆದುದನ್ನು ಉಲ್ಲೇಖಿಸುತ್ತದೆ. ಈ ಆಚಾರ್ಯನನ್ನು ಗೋಲಕಿಮಠದ ಸ್ಥಾಪನಾಚಾರ್ಯನೆಂದು ಹೇಳಲಾಗುತ್ತದೆ. ಹಿರಾಲಾಲ (೧೯೨೭) ಅವರ ಪ್ರಕಾರ, ಈ ಮಠವನ್ನು ನರ್ಮದಾ ನದಿಯ ದಂಡೆಯ ಮೇಲೆ ತ್ರಿಪುರಿಯಿಂದ ೧೨ ಮೈಲು ದೂರವಿರುವ ಭೇಡಘಾಟದಲ್ಲಿ ಸ್ಥಾಪಿಸಲಾಗಿತ್ತು. ಆಂಧ್ರಪ್ರದೇಶದ ಮಲ್ಕಾಪುರಮ್ ಶಾಸನದಲ್ಲಿ ಬರುವ ವಿಶ್ವೇಶ್ವರದೇಶಿಕ, ವಿಶ್ವೇಶ್ವರಶಿವ ಮತ್ತು ವಿಶ್ವೇಶ್ವರಶಿವಾಚಾರ್ಯ ಪರ್ಯಾಯ ನಾಮಗಳ ವಿಶ್ವೇಶ್ವರಶಂಭುವು ಗೋಳಕಿಮಠದ ಅನುಯಾಯಿಯಾಗಿದ್ದನು. ಮತ್ತು ಆಂಧ್ರಪ್ರದೇಶಕ್ಕೆ ವಲಸೆ ಬರುವುದಕ್ಕೆ ಮೊದಲು ಇವನು ಗೌಡದೇಶದ ದಕ್ಷಿಣ ರಾಢಕ್ಕೆ ಸೇರಿದ ಪೂರ್ವಗ್ರಾಮದ ನಿವಾಸಿಯಾಗಿದ್ದನು.

ಹೀಗಿದ್ದೂ, ಗೋಳಕಿಸಂಪ್ರದಾಯದ ಆಚಾರ್ಯರು ಆಂಧ್ರಪ್ರದೇಶ, ತಮಿಳುನಾಡುಗಳಲ್ಲಿ ಇದಕ್ಕೂ ಮೊದಲೇ ನೆಲೆಸಿದ್ದರು. ಆಂಧ್ರಪ್ರದೇಶಕ್ಕೆ ಸಂಧಪಟ್ಟಂತೆ ಈ ಬಗ್ಗೆ ಕೆಳಗಿನ ಶಾಸನಗಳು ಹೀಗೆ ತಿಳಿಸುತ್ತವೆ. ನೊಳಂಬ ಪಲ್ಲವ ಅರಸ ಬೀರನೊಳಂಬನ ಮಗ ಅಣ್ಣಯ್ಯದೇವನು ಅನಂತಪುರದ ಸುತ್ತಲಿನ ಪ್ರದೇಶವನ್ನು ಆಳುತ್ತಿದ್ದಾಗ, ನೊಳಂಬೇಶ್ವರ ದೇವಾಲಯದೊಂದಿಗೆ ಸಂಬಂಧ ಹೊಂದಿದ್ದ ವರುಣಶಿವನೆಂಬ ಆಚಾರ್ಯ ಕಂಡುಬರುತ್ತಾನೆ (೧೯೧೬, ೭೫೫ ಕ್ರಿ.ಶ. ೯೩೬). ೧೧ನೇ ಶತಮಾನದ ಅಂದರೆ ಶಕವರ್ಷ ೯೯೮ರ ತೆಲುಗು ಚೋಡ ಬಿಜದೇವನ ಶಾಸನವು ಗೋಳಕಿಮಠದ ಉತ್ತಮಶಿವನೆಂಬ ಆಚಾರ್ಯನಿಗೆ ಒಂದು ಗ್ರಾಮವನ್ನು ದತ್ತಿಕೊಟ್ಟುದನ್ನು ಉಲ್ಲೇಖಿಸುತ್ತದೆ (೧೯೩೯-೪೦, ೬೨). ಗುಂಟೂರು ಜಿಲ್ಲೆಯ ಸತ್ತೆನಪಲ್ಲೆ ಗ್ರಾಮದಲ್ಲಿ ದೊರೆತ ೧೨ನೇ ಶತಮಾನದ ದಿನಾಂಕ ರಹಿತ ಶಾಸನವು ತ್ರಿಕೋಟೀಶ್ವರ ದೇವಾಲಯಕ್ಕೆ ಕೊಟ್ಟ ಭೂದತ್ತಿಯನ್ನು ಉಲ್ಲೇಖಿಸುತ್ತದೆ. ಅಲ್ಲದೆ ನಂತರ ಆ ದತ್ತಿಯನ್ನು ಈಶಾನಶಿವನೆಂಬವನಿಗೆ ಹಸ್ತಾಂತರಿಸಿದುದನ್ನೂ ಉಲ್ಲೇಖಿಸುತ್ತದೆ. ಈ ಮೂರೂ ಉಲ್ಲೇಖಗಳು ವಿಶ್ವೇಶ್ವರಶಿವನು ಆಂಧ್ರಪ್ರದೇಶಕ್ಕ ಬರುವ ಪೂರ್ವದಲ್ಲಿಯೇ ಅಲ್ಲಿ ಗೋಳಕಿ ಸಂಪ್ರದಾಯ ನೆಲೆಯೂರಿದ್ದನ್ನು ಸ್ಪಷ್ಟಪಡಿಸುತ್ತವೆ.

ಕಾಕತೀಯ ಗಣಪತಿ (ಕ್ರಿ.ಶ. ೧೧೯೯-೧೨೬೧) ಮತ್ತು ರುದ್ರಮದೇವಿ (ಕ್ರಿ.ಶ. ೧೨೬೯-೯೫)ಯರ ಅಧಿಪತ್ಯವಿದ್ದ ಪ್ರದೇಶಗಳಲ್ಲಿ ಮೇಲೆ ಹೇಳಿದ ವಿಶ್ವೇಶ್ವರಶಿವನಿಂದಾಗಿ ಗೋಳಕಿ ಶೈವಪಂಥ ಭದ್ರವಾಗಿ ನೆಲೆಯೂರಿದ್ದಿತು. ಈತನು ತನ್ನ ರಾಜಗುರು ಅಧಿಕಾರದಿಂದ, ಆ ಪ್ರದೇಶದ ಧಾರ್ಮಿಕ ಜೀವನವನ್ನು ನಿಯಂತ್ರಿಸಿದನು. ಈ ಅರಸರ ಅನೇಕ ಶಾಸನಗಳು ಗೋಳಕಿ ಲಕ್ಷಾಧ್ಯಾಯಿವಂಶದ ಈ ಆಚಾರ್ಯರ ಬಗೆಗೆ, ಅವರು ನಿರ್ಮಿಸಿದ ದೇವಾಲಯ ಮತ್ತು ಮಠಗಳ ನಿರ್ಮಾಣದ ಬಗೆಗೆ, ಧಾರ್ಮಿಕ ಮತ್ತು ಜನಹಿತ ಕಾರ್ಯಗಳಿಗಾಗಿ ಅವರು ದತ್ತಿ ಪಡೆದುದರ ಬಗೆಗೆ ಹೇಳುತ್ತವೆ. ಈ ಆಚಾರ್ಯರಿಗೆ ಸೇರಿದ ಸಂಸ್ಥೆಗಳು ಈ ಪ್ರದೇಶದ ತುಂಬ ಅಲ್ಲೊಂದು ಇಲ್ಲೊಂದು ಹರಡಿದ್ದವು. ಮತ್ತು ಅವು ೧೬ನೇ ಶತಮಾನದವರೆಗೆ ಮುಂದುವರಿದವು (ನಕ್ಷೆ ೧). ARE ೧೯೩೬/೭, ಭಾಗ ೨. ಪ್ಯಾರಾ ೧೯ರಿಂದ ಎತ್ತಿಕೊಂಡು, ಒಂದಿಷ್ಟು ವಿಸ್ತರಿಸಿ ಈ ಪ್ರಕರಣದ ಕೊನೆಯಲ್ಲಿ ಕೊಟ್ಟಿರುವ ಆಚಾರ್ಯರ ವಂಶಾವಳಿಯನ್ನು ರೂಪಿಸಲು ಈ ಶಾಸನಗಳು ಸ್ವಲ್ಪ ನೆರವಾಗುತ್ತವೆ.

ಕಾಕತೀಯ ಅವಧಿಯ ಇನ್ನೂ ಕೆಲವು ಶಾಸನಗಳಿದ್ದು, ಅವುಗಳಲ್ಲಿ ಉಲ್ಲೇಖಿಸಲಾದ ಆಚಾರ್ಯರು ಬಹುಶಃ ಗೋಳಕಿವಂಶಕ್ಕೆ ಸೇರಿದವರಾಗಿದ್ದಾರೆ. ಹೀಗಿದ್ದೂ ಅವರನ್ನು ಈ ವಂಶಾವಳಿಯ ಪಟ್ಟಿಯಲ್ಲಿ ಪರಿಗಣಿಸಲಿಕ್ಕಾಗದು. ಇವುಗಳನ್ನು ಹೊರತುಪಡಿಸಿದರೂ ಗಣಪತಿಯ ಆಳಿಕೆಯಲ್ಲಿ ಕೆತ್ತಲಾಗಿರುವ ಶಾಸನವೊಂದು (೯೩೭/೮, ೨೩೩,ಕ್ರಿ.ಶ. ೧೨೫೭) ಪುಷ್ಪೇಶ್ವರ ಮಹಾದೇವರಿಗಾಗಿ ಒಂದು ಗ್ರಾಮವನ್ನು ದತ್ತಿ ಪಡೆದ ಈಶಾನಗುರುವಿನ ಬಗೆಗೆ ಹೇಳುತ್ತದೆ. ಪ್ರತಾಪರುದ್ರನ ಕಾಲದ (೯೫೭/೮, ೫೦, ಕ್ರಿ.ಶ. ೧೩೧೩) ಇನ್ನೊಂದು ಶಾಸನ ರಾಜಗುರುದೇವನೆಂದು ಕರೆಯಲ್ಪಡುತ್ತಿದ್ದ ಅಘೋರಶಿವಾಚಾರ್ಯನಿಗೆ ಕೊಟ್ಟ ಭೂದತ್ತಿ ಬಗೆಗೆ ಹೇಳುತ್ತದೆ. ಅದೇ ಅರಸನ ಮತ್ತೊಂದು ಶಾಸನ (೯೦೫, ೨೩೩, ಕ್ರಿ.ಶ. ೧೩೧೩)ದಲ್ಲಿ ಚಂದ್ರಭೂಷಣ ಶಿವಾಚಾರ್ಯನ ಹೆಸರು ಕಾಣಿಸಿಕೊಂಡಿದೆ. ಶ್ರೀಶೈಲಮ್‌ದಲ್ಲಿ ದೊರೆತ ಒಂದು ಶಾಸನದಲ್ಲಿ (೯೧೫, ೩೬, ಕ್ರಿ.ಶ. ೧೩೧೩)ಅರಸುಮಠಕ್ಕೆ ಸೇರಿದ ಈಶ್ವರಶಿವಾಚಾರ್ಯನ ಹೆಸರು ಕಾಣಿಸಿಕೊಂಡಿದೆ.

ಶಾಂತಶಿವನ ಮಗನಾದ ಸದಾಶಿವನು ಗುಂಟೂರು ಜಿಲ್ಲೆಯ ಕಂಭಂಪಡು ಗ್ರಾಮದಲ್ಲಿಯ ಬೆಂಗೇಶ್ವರ ದೇವಾಲಯದಲ್ಲಿ ಸ್ಥಾನಪತಿಯಾಗಿದ್ದನು (೯೩೧/೨, ೩೦೧, ಕ್ರಿ.ಶ. ೧೨೫೮). ಅವನ ವಂತರದ ಆಚಾರ್ಯನು ಕಾಕತೀಯ ಜನ್ನಿಗದೇವನ ರಾಜಗುರುವಾಗಿದ್ದನು. ಅದೂ ಅಲ್ಲದೆ ಅವನು ಶ್ರೀಪರ್ವತದಲ್ಲಿರುವ ಅಭಿನವ ಗೋಳಕಿ ಮಠದ ಅಧಿಪತಿಯಾಗಿದ್ದನು (೯೪೦/೧, ೫೦). ಚಿತ್ತಿರಮೇಳಿ ಸಂಘದ ಸದಸ್ಯರು ಚಿತ್ತಿರಮೇಳೇಶ್ವರ ದೇವಾಲಯದಲ್ಲಿ ಪುಷ್ಪಗಿರಿಯ ಯಜ್ಞಜೀಯರನ ಶಿಷ್ಯನಾದ ವ್ಯಾಪಕಶಿವನನ್ನು ಶ್ರೀಕಾರ್ಯಮ್‌ನೇಮ ನೇಮಣೂಕಿ ಮಾಡಿದ್ದರು (೯೫೩/೪, ೬). ಅದೇ ವರ್ಷದ ೧೪ನೇ ಮತ್ತು ೯ನೇ ಶಾಸನಗಳಲ್ಲಿ ಬರುವ ವ್ಯಾಪಕಶಿವ ಹೆಸರಿನ ಆಚಾರ್ಯನು ಈ ವ್ಯಾಪಕಶಿವನನ್ನು ಸ್ಪಷ್ಟವಾಗಿ ಹೋಲುತ್ತಾನೆ (೯೫೩/೪, ೯, ಕ್ರಿ.ಶ. ೧೨೩೧).

೧೬ನೇ ಶತಮಾನದಲ್ಲಿಯೂ ಗೋಳಕಿವಂಶದ ಆಚಾರ್ಯರ ಬಗೆಗೆ ಹೀಗೆ ತಿಳಿದು ಬರುತ್ತದೆ. ಈ ಶತಮಾನದಲ್ಲಿ ಗೋಳಕಿವಂಶದ ಆಚಾರ್ಯರು ವಿಜಯನಗರ ಅರಸರ ಆಶ್ರಯದಲ್ಲಿದ್ದರು. ಇವರಲ್ಲಿ ಅಘೋರಶಿವಾಚಾರ್ಯನೆಂಬವನು ಪುಷ್ಪಗಿರಿಯಲ್ಲಿಯ ದೇವಾಲಯದ ಶಿಖರದ ಗಾರೆ ಕೆಲಸ ಮಾಡಿಸಿದಂತೆ ತೋರುತ್ತದೆ (೯೦೫, ೩೦೭, ಕ್ರಿ.ಶ. ೧೫೦೧). ತೆರ್ಕುಮಠದ ಇಮ್ಮಡಿ ರುದ್ರಶಿವಾಚಾರ್ಯ ಹೆಸರಿನ ಆಚಾರ್ಯನು ಕಾಲಹಸ್ತೀಶ್ವರ ದೇವಾಲಯದಲ್ಲಿಯ ದೇವರ ಕಾಣಿಕೆಗಾಗಿ ಹಣ ಪಡೆದನು (೯೨೪,೧೬೪ ಮತ್ತು ೧೭೨, ಕ್ರಿ.ಶ. ೧೫೧೪ ಮತ್ತು ೧೫೧೯ ಅನುಕ್ರಮವಾಗಿ). ಇವನು ೯೦೫ ರ ವರದಿಯ ಕ್ರಿ.ಶ. ೧೫೭೧ರ ಶಾಸನ (ನಂ. ೪೯೭)ದಲ್ಲಿ ಪೊನ್ನಂಬಲ ಧರ್ಮಶಿವಾಚಾರ್ಯನ ಶಿಷ್ಯನೆಂದು ವರ್ಣಿಸಲಾದ ವ್ಯಕ್ತಿಯೇ ಆಗಿರಲು ಸಾಧ್ಯ. ಈ ಪೊನ್ನಂಬಲ ಧರ್ಮಶಿವಾಚಾರ್ಯನು ಅನಂತ ಶಿವಾಚಾರ್ಯನ ಶಿಷ್ಯನಾಗಿದ್ದನು.

ದೇವಿಕಾಪುರಮ್‌ದಲ್ಲಿದ್ದ ಗೋಲಕಿಮಠವು ೧೬ನೇ ಶತಮಾನದಲ್ಲಿ ವಿಜಯನಗರ ಅರಸರ ಆಶ್ರಯಪಡೆದ ಪ್ರಭಾವೀ ಧಾರ್ಮಿಕ ಕೇಂದ್ರವಾಗಿದ್ದಂತೆ ತೋರುತ್ತದೆ. ಭಿಕ್ಷಾಮಠದ

ವಂಶಾವಳಿಯನ್ನು ಉಲ್ಲೇಖಿಸುವ ಈ ಪ್ರಾಚೀನ ಶಾಸನವು ಸಾಳುವ ನರಸಿಂಹನ ಮಗ ಇಮ್ಮಡಿ ರಾಯದೇವನ ಆಳಿಕೆಯ ಕಾಲ(ಕ್ರಿ.ಶ. ೧೫೦೫)ದ್ದಾಗಿರುತ್ತದೆ. ಮತ್ತು ಅದು ದೇವಾಲಯುದ ಧರ್ಮದರ್ಶಿ(Trustee) ವಿಶ್ವೇಶ್ವರಶಿವಾಚಾರ್ಯನು ಗ್ರಾಮನಿವಾಸಿಯೊಬ್ಬನಿಗೆ ಧರ್ಮದರ್ಶಿತ್ವದ ಹಕ್ಕು ಬಿಟ್ಟುಕೊಟ್ಟುದನ್ನು ದಾಖಲಿಸುತ್ತದೆ (೧೯೧೨, ೩೫೪). ಕೃಷ್ಣದೇವರಾಯನ ಆಳಿಕೆಯಲ್ಲಿ ಅದೇ ಆಚಾರ್ಯ ಮುಂದುವರೆದಿದ್ದು ಇಲ್ಲಿ ಪುನಃ ಅವನನ್ನು ಧರ್ಮದರ್ಶಿ ಎಂದು ಕರೆಯಲಾಗಿದೆ (೧೯೧೨, ೩೮೯, ೩೯೦ ಮತ್ತು ೩೬೫ ಅನುಕ್ರಮವಾಗಿ ಕ್ರಿ.ಶ. ೧೫೧೩, ೧೫೧೫ ಮತ್ತು ೧೫೨೩). ಈಶಾನಶಿವಾಚಾರ್ಯನೆಂಬ ಮತ್ತೊರ್ವ ಆಚಾರ್ಯನು ಕೂಡ ವಿಶ್ವೇಶ್ವರಶಿವಾಚಾರ್ಯನ ಸಮಕಾಲೀನನೆಂದು ಕಾಣಿಸಿಕೊಳ್ಳುತ್ತಾನೆ. ಮೊದಲನೆಯವನು (ಈಶಾನ ಶಿವಾಚಾರ್ಯ) ದೇವಾಲಯದ ಖಜಾಂಚಿಯೆಂದು ಕೂಡ ಬಣ್ಣಿಸಲ್ಪಟ್ಟಿದ್ದಾನೆ (೧೯೧೨, ೩೫೨, ಕ್ರಿ.ಶ. ೧೫೮೯). ೧೯೧೯ರ ವರದಿಯ ಶಾಸನ ೩೬೮ (ಕ್ರಿ.ಶ. ೧೫೨೨), ೩೭೩ (ಕ್ರಿ.ಶ. ೧೫೩೧) ಮತ್ತು ೨೫೬(ಕ್ರಿ.ಶ. ೧೫೩೩)-ಇವುಗಳಿಂದ ಅವನು ದೇವಾಲಯ ಮತ್ತು ಮಠದಲ್ಲಿ ಮಹತ್ವದ ಕಾರ್ಯ ನಿರ್ವಹಿಸುತ್ತಿದ್ದನೆಂದು ತಿಳಿದು ಬರುತ್ತದೆ. ಅವರಿಬ್ಬರ ನಡುವೆ ಗುರು-ಶಿಷ್ಯ ಸಂಬಂಧವಿದ್ದುದು ಸ್ಪಷ್ಟವಿಲ್ಲ. ೧೯೧೨ರ ವರದಿಯ ಶಾಸನ ೪೦೦ರ ಪ್ರಕಾರ, ತೀರಿಕೊಂಡ ಈಶಾನ ಶಿವಯೋಗೀಂದ್ರನೇ ಮೇಲೆ ಉಲ್ಲೇಖಿಸಿದ ಶಾಸನಗಳಲ್ಲಿ ಬರುವ ಆಚಾರ್ಯನಾಗಿದ್ದುದೂ ಸಂಶಯಾತ್ಮಕ.

ವಿಮಲ ಶಿವ

(೧೯೦೫, ೨೫೩, ಕ್ರಿ.ಶ. ೧೨೪೭)

(ತ್ರಿಪುರಾಂತಕಮ್‌ದಲ್ಲಿ ಮಠವನ್ನು

ಕಟ್ಟಿಸಿದ ಗೋಲಗಿರಿ ಸಂಪ್ರದಾಯದವನು)



ಧರ್ಮಶಿವ

(೧೯೦೫, ೨೫೩, ಕ್ರಿ.ಶ. ೧೨೪೭, ೧೯೦೫,

೨೨೩, ಕ್ರಿ.ಶ. ೧೨೫೨, ೧೯೫೮, ೮೯)



ವಿಶ್ವೇಶರ ಶಿವ

(೧೯೩೬/೭, ೨೯೩,ಕ್ರಿ.ಶ. ೧೩೪೩, ೧೯೩೬/೭,

೨೯೪, ಕ್ರಿ.ಶ. ೧೨೫೨ ೧೯೩೬/೭, ೨೦೧,

ಕ್ರಿ.ಶ. ೧೨೫೨ ೧೯೧೭/೮೪, ಕ್ರಿ.ಶ. ೧೨೬೧,

೧೯೧೭, ೯೫, ಕ್ರಿ.ಶ. ೧೨೬೮, ೧೯೦೫, ೧೬೯,

೧೯೫೪/೫, ೧೪೫, ೧೯೫೮/೯, ೯೪, ೧೯೧೭,

೯೬ ಕ್ರಿ.ಶ. ೧೨೮೨)




ಬ. ತಮಿಳುನಾಡು

೧.ಲಕ್ಷಾಧ್ಯಾಯಿ (ಭಿಕ್ಷಾ) ಗುರು ಪರಂಪರೆ:

ತಮಿಳುನಾಡಿನಲ್ಲಿ ಈ ಗುರು ಪರಂಪರೆಯನ್ನು ಕುರಿತು ಅತಿ ಪ್ರಾಚೀನ ಶಾಸನವು ಮೊದಲನೇ ರಾಜೇಂದ್ರ ಚೋಳನ ಆಳಿಕೆಯಲ್ಲಿ ಕೆತ್ತಿಸಿದುದಾಗಿದೆ. ಕನಕಸಭಾಪತಿ... ದೇಶಿಕರ್ ಎಂಬ ಆಚಾರ್ಯನು ಕೀಳೈಕಟ್ಟು (ಆಧುನಿಕ ಕೀಳೈಯೂರ್, ತಾಲೂಕು ನಗಪತ್ತಿನಮ್) ಊರಿನ ನಿವಾಸಿಯಾಗಿದ್ದನೆಂದು ಈ ಶಾಸನ ಹೇಳುತ್ತದೆ. ಕೀಳೈಕಟ್ಟು ಗ್ರಾಮವು ಚಿದಂಬರಮ್

ಜಿಲ್ಲೆಯ ಮೇಲೈಚ್ಚೇರಿ ಗ್ರಾಮದಲ್ಲಿಯ ಪತಂಜಲಿದೇವರಮಠದಲ್ಲಿ ವಾಸಿಸುತ್ತಿದ್ದ ಲಕ್ಷಾಧ್ಯಾಯಿ ಸಂತಾನದ ಆಚಾರ್ಯರ ಪೀಠವಾಗಿದ್ದಿತು (೧೯೪೬/೭, ೮೮, ಕ್ರಿ.ಶ. ೧೦೪೧). ಈ ಶಾಸನವು ನಗಪತ್ತಿನಮ್ ತಾಲೂಕಿನಲ್ಲಿ ದೊರೆತಿರುವುದರಿಂದ ಅಲ್ಲೊಂದು ಗೋಳಕಿಮಠ ಇಲ್ಲವೆ ಗೋಳಕಿ ಪಂಥಕ್ಕೆ ಸೇರಿದ ಆಚಾರ್ಯರ ಒಂದು ಗುಂಪು ಇದ್ದಿರಬಹುದು. ಹಾಗೆಯೇ ಈ ವಂಶದ ಪೂರ್ವಜರು ಈ ಪ್ರದೇಶಗಳಲ್ಲಿ ಇದ್ದಿರಬಹುದಾದ ಸಾಧ್ಯತೆಯನ್ನು ಅದು ಸೂಚಿಸುತ್ತದೆ.

೧೨ನೇ ಶತಮಾನದಲ್ಲಿ, ಲಕ್ಷಾಧ್ಯಾಯಿವಂಶದ ಜ್ಞಾನಶಿವರಾವಳನ ಶಿಷ್ಯ ಓಂಕಾರದೇವರಾವಳನು ವಾರಣಾಸಿ (ಬನಾರಸ)* ಯ ಕೊಲ್ಲಿಮಠ ಸದಸ್ಯನಾಗಿದ್ದನು (೧೯೨೯/೩೦, ೧೧೧, ಕ್ರಿ.ಶ. ೧೧೦೬). ಈ ಆಚಾರ್ಯನು ತಿರುಪಾಚ್ಚೂರ್‌ದಲ್ಲಿಯ ವಾಚೇಶ್ವರದೇವಾಲಯದ ಟ್ರಸ್ಟಿಯೊಬ್ಬನಿಗೆ (ಸ್ಥಾನತ್ತಾರ್) ಅಲ್ಲಿಯ ದೇವರಿಗೆ ತಿರುಪವಿತ್ರಮ್ ಒದಗಿಸುವುದಕ್ಕಾಗಿ ಸ್ವಲ್ಪ ಹಣ ಕೊಟ್ಟಿದ್ದನೆಂದು ಹೇಳಲಾಗಿದೆ.

೧೩ನೇ ಶತಮಾನದ ಚೋಳ ಮತ್ತು ಪಾಂಡ್ಯ ಶಾಸನಗಳಲ್ಲಿ ಗೋಳಕಿವಂಶಕ್ಕೆ ಸೇರಿದ ಆಚಾರ್ಯರ ಮತ್ತು ಮಠಗಳ ಉಲ್ಲೇಖಗಳು ಹೇರಳವಾಗಿ ಹೀಗೆ ದೊರೆಯುತ್ತವೆ: ಮೂರನೆಯ ಕುಲೋತ್ತುಂಗನ ಎರಡು ಶಾಸನಗಳು ರಾವಳ್‌ನ (೧೯೩೦/೧, ೭೨, ಕ್ರಿ.ಶ. ೧೨೧೭) ಮತ್ತು ಶಿವದವನೆಪ್ಪೆರುಮಾಳ್ ಉರುಫ್ ಅಘೋರದೇವ ರಾವಳನ್ (೧೯೩೨/೩, ೧೪೫, ಕ್ರಿ.ಶ. ೧೨೧೬) ಬಗೆಗೆ ಹೇಳುತ್ತವೆ. ಇವರಲ್ಲಿ ಮೊದಲನೆಯ ಆಚಾರ್ಯನು ವಾರಣಾಸಿ ಭಿಕ್ಷಾಮಠಕ್ಕೆ ಸೇರಿದವನೆಂದು ಹೇಳಲಾಗಿದೆ. ಮತ್ತು ಎರಡನೆಯವನು ವಾರಣಾಸಿಯ ಮಠಕ್ಕೆ ಅಧೀನನಾಗಿರದಿದ್ದರೂ ಅದೇ ಗೋಳಕಿ-ಭಿಕ್ಷಾವಂಶಕ್ಕೆ ಸೇರಿರುವ ಸಾಧ್ಯತೆ ಇದೆ. ಆ ಆಚಾರ್ಯನು ಶಿವದವನಪೆರುಮಾಳ್ ಎಂಬ ಇನ್ನೊಂದು ಹೆಸರನ್ನು ಹೊಂದಿದ್ದನೆಂದು ಹೇಳುತ್ತಿರುವುದರಿಂದ, ಎರಡನೆಯ ಶಾಸನಕ್ಕೆ ಹೆಚ್ಚು ಮಹತ್ವ ಬಂದಿರುತ್ತದೆ. ಬಹುಶಃ ಶಿವದವನಪ್ಪೆರುಮಾಳ್ ಅವನ ಮೊದಲನೇ ಹೆಸರಾಗಿದ್ದು, ಧರ್ಮಗುರುದೀಕ್ಷೆ ಪಡೆದು, ಆಚಾರ್ಯಶ್ರೇಣಿ ಸೇರಿದ ಬಳಿಕ ಅವನಿಗೆ ಅಘೋರದೇವ ರಾವಳನ್ ಹೆಸರು ಬಂದಿರಬಹುದಾಗಿದೆ. ಶಿವದವನಪ್ಪೆರುಮಾಳ್ ಗೋಳಕಿ ವಂಶದವನಾಗಿದ್ದನೆಂದೂ, ಮಠವನ್ನು ಸ್ಥಾಪಿಸಲು ನಿವೇಶನವನ್ನು ಸ್ವೀಕರಿಸಿದ್ದರಿಂದ ಅವನಿಗೆ ಗೋಳಕಿವಂಶದ ಗುರುಪರಂಪರೆಯ ದೀಕ್ಷೆ ಕೊಡಲಾಯಿತೆಂದೂ ಆ ಶಾಸನ ಹೇಳುತ್ತದೆ. ರಾವಳರ್ ಪ್ರತ್ಯಯ ದೀಕ್ಷಾವಿಧಿಯನ್ನು ಸೂಚಿಸದೆ, ಗೋಳಕಿಪಂಥದ ವಿಶಿಷ್ಟ ವರ್ಗವನ್ನು ಸೂಚಿಸುತ್ತದೆಂಬುದನ್ನು ಕೆಳಗಿನ ಬೇರೆ ಕೆಲವು ಶಾಸನಗಳು ದೃಢಪಡಿಸುತ್ತವೆ.

೧. ತಿರುವನ ಮಲೈದಲ್ಲಿರುವ ಗೋಳಕಿಮಠದ ಕೈಲಾಸದೇವರಾವಳರ್ (೧೯೩೫/೬, ೧೧, ಕ್ರಿ.ಶ. ೧೨೩೪)

* ಇದು ಸುಪ್ರಸಿದ್ಧ ಬನಾರಸವಲ್ಲ, ಆಂಧ್ರಪ್ರದೇಶದ ಗುಂಟೂರು ಜಿಲ್ಲೆಯ ಇಂದಿನ ಕಾಶೀನಗರವೆಂದು ಡಾ. ಎಂ.ಎಂ. ಕಲಬುರ್ಗಿ ಹೇಳುತ್ತಾರೆ - ಅನು.

೨. ತಿರುಕೊಡುಂಕುನ್ರಮ್‌ದಲ್ಲಿರುವ ಶ್ರೀಪರ್ವತಿ ಮಠದ ಈಶಾನಶಿವರಾವಳರ್ (೧೯೨೪, ೨೦೯, ಸುಮಾರು ಕ್ರಿ.ಶ. ೧೨೬೬)

೩. ಬಹುಶಃ ಪಶುಪತಿರಾವಳರ್ (೧೯೨೮/೯, ४೮, ಕ್ರಿ.ಶ. ೧೨೭೭) ಮತ್ತು ಪೊನ್ನಂಬಲಕೂತ್ತನ್ ಮಠದ ಪಶುಪತಿರಾವಳರ್ (೧೯೪೧/೨, ೨೬೫) ಒಬ್ಬನೇ ಆಗಿರಲು ಸಾಧ್ಯ. ಈ ಎಲ್ಲ ಶಾಸನಗಳು ಈ ಆಚಾರ್ಯರು ಗೋಳಕಿವಂಶದ ಲಕ್ಷಾಧ್ಯಾಯಿ ಸಂತಾನಕ್ಕೆ ಸೇರಿದ್ದರೆಂದು ಸ್ಪಷ್ಟವಾಗಿ ಹೇಳುತ್ತವೆ.

ಈಶಾನದೇವ (೧೯೨೪ರ ವರದಿಯ ಶಾಸನ ೨೦೯ರಲ್ಲಿ ಬರುವವನಿಗಿಂತ ಬೇರೆ) ಮತ್ತು ಅವನ ಶಿಷ್ಯರು ಕುರುಂಗಲಮ್ ಉರುಫ್ ಸದವಚಕನಲ್ಲುರ್‌ದಲ್ಲಿರುವ ನಲ್ಲಪ್ಪೆರುಮಾಳ ಮಠದಲ್ಲಿ ವಾಸಿಸುತ್ತಿದ್ದರು. ಅವರು ತಂಜಾವೂರು ಜಿಲ್ಲೆಯ ತಿರುವರೂರ್‌ದಲ್ಲಿದ್ದ ಕೃಷ್ಣ-ಗೋಳಕಿಮಠದಿಂದ ವಲಸೆ ಬಂದರೆಂದು ಹೇಳಲಾಗುತ್ತದೆ (೧೯೦೯, ೫೦೪, ಮೊದಲನೆಯ ಸುಂದರಪಾಂಡ್ಯನ ಕಾಲ)

ರಾಮನಾಥ್‌ಪುರಮ್ ಜಿಲ್ಲೆಯ ತಿರುಪುತ್ತೂರ್‌ದಲ್ಲಿ ದೊರೆತ ಪಾಂಡ್ಯ ಅರಸ ವೀರಪಾಂಡ್ಯದೇವನ ಶಾಸನವು, ಭಿಕ್ಷಾಮಠದ "ಮುದಲಿಯಾರ್"ನ ಶಿಷ್ಯನಾದ ರಾಜೇಂದ್ರತ್ತು-ಮುದಲಿಯಾರ್ ಶಿವಪ್ರಕಾಶರ್ ಎಂಬ ಆಚಾರ್ಯನು ಅಧಿಪತಿಯಾಗಿದ್ದ ಮಠದ ಬಗೆಗೆ ಹೇಳುತ್ತದೆ (೧೯೩೫/೬, ೧೬೪, ಕ್ರಿ.ಶ. ೧೨೮೪). ಶಿವಪ್ರಕಾಶಮಠವನ್ನು ಸರ್ವೇಶ್ವರನೆಂಬ ಆಚಾರ್ಯನು ನೋಡಿಕೊಳ್ಳುತ್ತಿದ್ದನೆಂದು ಹೇಳುವ ಈ ಶಾಸನವು ಸ್ಪಷ್ಟವಾಗಿ ೧೯೩೫/೬, ೧೭೩ರ ಶಾಸನದೊಂದಿಗೆ ಸಂಬಂಧ ಹೊಂದಿದೆ (ಕ್ರಿ.ಶ. ೧೨೬೪). ಇನ್ನೊಂದು ದಿನಾಂಕ ರಹಿತ ಶಾಸನವು (೧೯೦೪, ೬೩೬, ಸರಕಾರಿ ಶಾಸನತಜ್ಞರು ಮೂರನೆಯ ರಾಜರಾಜನ ಸಮಕಾಲೀನವೆಂದು ಭಾವಿಸಿರುವ ಶಾಸನ) ಲಕ್ಷಾಧ್ಯಾಯಿ ಮುದಲಿಯಾರು ಸಂತಾನಕ್ಕೆ ಸೇರಿದ "ಸ್ವಾಮಿದೇವರ್" ಕುರಿತು ಹೇಳುತ್ತದೆ. ಇಲ್ಲಿ ಆಚಾರ್ಯ ಹೆಸರಿನ ಬದಲು ಮುದಲಿಯಾರ್ ಹೆಸರನ್ನು ಬಳಸಿರುವುದರಿಂದ ಇವು ಮಹತ್ವದ ಶಾಸನಗಳಾಗಿರುತ್ತವೆ.

ಈ ೧೩ನೇ ಶತಮಾನದಲ್ಲಿ ಗೋಳಕಿವಂಶವೃದ್ಧಿಯು ತಮಿಳುನಾಡಿಗಷ್ಟೇ ಸೀಮಿತವಾಗದೆ, ಹೊಸದಾಗಿ ವಶಪಡಿಸಿಕೊಳ್ಳಲಾದ ನೆರೆ ರಾಜ್ಯಗಳ ಪ್ರದೇಶಗಳಿಗೂ ವಿಸ್ತರಿಸಿತು. ಚೋಳ ಅರಸರು ಕನ್ನಡನಾಡಿನ ಪೂರ್ವಭಾಗಗಳನ್ನು (ಆಧುನಿಕ ಕೋಲಾರ ಜಿಲ್ಲೆ) ವಶಪಡಿಸಿಕೊಂಡಾಗ ಗೋಳಕಿವಂಶ ಕೂಡಲೇ ಈ ಪ್ರದೇಶವನ್ನು ಪ್ರವೇಶಿಸಿತು. ಗೋಳಕಿಮಠದ ಶಿಷ್ಯರಲ್ಲಿ ಇಬ್ಬರು (ಸೋಮೇಶ್ವರ ದೇವರ್ ಮತ್ತು.... ನಾಯನಾರ್) ಅಂದರೆ ಲಕ್ಷಾಧ್ಯಾಯಿವಂಶದ ಸುರಮಿದೇವರ್ ಉರುಫ್ ಪ್ರಸನ್ನ ಶಿವಚ್ಚೈಯಾರ್‌ನ ಶಿಷ್ಯನಾದ ರಾಜಗುರು ವಿಶ್ವೇಶ್ವರಶಿವನ ಮಕ್ಕಳು, ಗಂಗಪ್ಪೆರುಮಾಳ್‌ನಿಂದ ಭೂದತ್ತಿ ಪಡೆದರು (ಕೋಲಾರ ೫೫, EXCಕೋಲಾರ, ಕ್ರಿ.ಶ. ೧೨೮೫). ದಿನಾಂಕ, ರಾಜಮನೆತನ ಮೊದಲಾದ ವಿವರಗಳಿಲ್ಲದ ಚಿಂಗ್ಲಪೇಟೆ ಜಿಲ್ಲೆಯ ತಿರುವಲ್ಲೂರ ತಾಲೂಕಿನ ರಾಮಗಿರಿ ಊರಲ್ಲಿ ದೊರೆತ ಮತ್ತೊಂದು ಶಾಸನವು ಚೋಳ-ಪಾಂಡ್ಯ-ಸ್ವಾಮಿದೇವ ಎಂಬ ಗೌರವ ಸೂಚನೆಯೊಂದಿಗೆ

ಪ್ರಶಾಂತ ಶಿವಮುಂಡಿಯಾರ್ (ಮುದಲಿಯಾರ್) ಎಂಬವನನ್ನು ಉಲ್ಲೇಖಿಸುತ್ತದೆ. ಈ ಆಚಾರ್ಯನನ್ನು ಗಂಗ ಶಾಸನದಲ್ಲಿರುವ ಇದೇ ಹೆಸರಿನ ವ್ಯಕ್ತಿಯೊಂದಿಗೆ ಸಮೀಕರಿಸಲು ಮನಸ್ಸಾಗುತ್ತದೆ. ಇದಕ್ಕೆ ಕಾರಣ, ಅವರೀರ್ವರೂ ಶಾಂಡಿಲ್ಯಗೋತ್ರಕ್ಕೆ ಸೇರಿದುದು (೯೦೪, ೬೯). (ಹೊಯ್ಸಳ ವೀರ ರಾಮನಾಥನ ಸಾವಂತ) ಗಂಗ ಪೆರುಮಾಳನ ಇನ್ನೂ ಒಂದು ಶಾಸನ "ನಮ್ಮ ಆಚಾರ್ಯ" ಎಂದು ಕರೆಯಲಾದ ಸಕಲ ಶಿವಪಂಡಿತರ್‌ನನ್ನು ಹೆಸರಿಸುತ್ತದೆ (ECX,ಚಿಂತಾಮಣಿಯ ೧೧೭, ಕ್ರಿ.ಶ. ೧೨೮೯).

೧೪ನೇ ಶತಮಾನದಲ್ಲಿಯೂ ಮೇಲೆ ಉಲ್ಲೇಖಿಸಿದ ಚಿದಂಬರದಲ್ಲಿದ್ದ ಪತಂಜಲಿದೇವರ್ ಮಠ (೯೪೬/೭, ೮೮, ಕ್ರಿ.ಶ. ೧೦೪೧)ದ ಅಭಿವೃದ್ಧಿ ಮುಂದುವರಿಯಿತು (೯೩೯/೪೦, ೧೧೫, ಕ್ರಿ.ಶ. ೧೩೦೧). ಅಳಿವಿಡೈತಾಂಗಿಪುರು ಗ್ರಾಮದ ನಾಟ್ಟವರ್‌ನು ಮಠದಲ್ಲಿ ಸ್ಥಾಪಿತವಾದ ವಿಶ್ವೇಶ್ವರನಾಯನಾರ್‌ಮೂರ್ತಿಗೆ ಪೂಜೆ ಸಲ್ಲಿಸುವುದಕ್ಕಾಗಿ ಮತ್ತು ಅಲ್ಲಿರುವ ತಪಸ್ವಿಗಳ ಊಟಕ್ಕಾಗಿ ಒಂದು ಗ್ರಾಮವನ್ನು ದತ್ತಿಯಾಗಿ ಕೊಟ್ಟನು. ಈ ಹೊತ್ತಿಗೆ ಮಠದ ಆಚಾರ್ಯನಾದ ವಿಶ್ವೇಶ್ವರನಾಯನಾರ್‌ನು ತೀರಿ, ತಂಜಾವೂರು ಜಿಲ್ಲೆಯ ತಿರುವಾರೂರ್‌ದಲ್ಲಿಯ ದಕ್ಷಿಣಗೋಳಕಿ ಮಠದ ಏಕಾಂಬರದೇವ ಮುದಲಿಯಾರ್‌ನು ತಿರುಕೊಡುಂಕುನ್ರಮ್‌ದಲ್ಲಿ ವಿರುದಮುದಿತ್ತನ್ ಹೆಸರಿನ ಸನ್ಯಾಸಿಮಠವನ್ನು ಸ್ಥಾಪಿಸಿದನು. ಪಾಂಡ್ಯ ಅರಸ ಮಾರವರ್ಮನ್ ವೀರಪಾಂಡ್ಯನ ಕಾಲದಲ್ಲಿ, ತಿರುನೆಲ್ವೇಲಿ ಜಿಲ್ಲೆಯ ಮನಪ್ಪಡೈವಿಡು ಗ್ರಾಮದಲ್ಲಿ ಆಗಮಶೀಲ ಉರುಫ್ ಉಮ್ಮೈಯೋರುಭಾಗ-ಮುದಲಿಯಾರ್ ಒಡೆತನದಲ್ಲಿ ಭಿಕ್ಷಾಮಠದ ಶಾಖೆಯೊಂದು ಇದ್ದಿತು (೯೮೯, ೪೪೮, ಕ್ರಿ.ಶ. ೧೩೫೧). ಅದೇ ಕಾಲದ್ದೆಂದು ಭಾವಿಸಲಾದ ಒಂದು ದಿನಾಂಕರಹಿತ ಶಾಸನದಲ್ಲಿ ಆಗಮಶೀಲ ಉಮ್ಮೈಯೋರುಭಾಗರ್‌ನ ಶಿಷ್ಯನೊಬ್ಬನ ಬಗೆಗೆ ಹೇಳಲಾಗಿದೆ (೯೮೯, ೪೪೩). ತಿರುವಾರೂರ್‌ದಲ್ಲಿದ್ದ ದಕ್ಷಿಣ-ಗೋಳಕಿ ಸನ್ಯಾಸಿಮಠದ ಏಕಾಮ್ರದೇವ ಮುದಿಯಾರ್‌ನು ಮಠದ ದುರಸ್ತಿಗಾಗಿ ಭೂದತ್ತಿಯನ್ನು ಪಡೆದನು (೯೨೪, ೨೩೪, ಕ್ರಿ.ಶ. ೧೩೫೭). ವ್ಯಾಪಕಶಿವನು ತಿರುಚ್ ಜಿಲ್ಲೆಯ ತಿರುವನೈಕ್ಕವಲ್‌ದಲ್ಲಿದ್ದ ನಡುವಿಲ್‌ಮಠದ ಶಿಷ್ಯನಾಗಿದ್ದನು.

ಗೋಳಕಿವಂಶವು ೧೫ನೇ ಶತಮಾನದಲ್ಲಿ ಊರ್ಜಿತಾವಸ್ಥೆಯಲ್ಲಿ ಮುಂದುವರೆದಿದ್ದಿತೆಂಬುದನ್ನು ಕ್ರಿ.ಶ. ೧೪೭೧ರ ಶಾಸನ ದೃಢಪಡಿಸುತ್ತದೆ. ಅದು ದಕ್ಷಿಣ ಆರ್ಕಾಟ್ ಜಿಲ್ಲೆಯ ಜತ್‌ಧರಿಕುಪ್ಪಮ್‌ದಲ್ಲಿಯ ಭಿಕ್ಷಾಮಠದ ಈಶಾನಶಿವಾಚಾರ್ಯ ಎಂಬ ಆಚಾರ್ಯನಿಗೆ ಭೂದತ್ತಿ ಕೊಟ್ಟುದರ ಬಗೆಗೆ ಹೇಳುತ್ತದೆ.

ಗೋಳಕಿ ಭಿಕ್ಷಾವಂಶವು ೧೬ನೇ ಶತಮಾನದ ವರೆಗೂ ಅಭಿವೃದ್ಧಿಪಥದಲ್ಲಿ ಸಾಗಿದ್ದಿತೆಂಬುದಕ್ಕೆ ಸಾಕಷ್ಟು ಪುರಾವೆಗಳಿವೆ. ಸರ್ವಶಿಕ್ಷಾಮಣಿ ವೇಂಬತ್ತೂರ್ ಮುದಲಿಯಾರ್ ಎಂಬ ಅಘೋರಶಿವಾಚಾರ್ಯನ ಶಿಷ್ಯನಾದ ಪುಷ್ಪಲಕಶಿವಾಚಾರ್ಯನ ಶಿಷ್ಯ ಈಶಾನ ಶಿವಾಚಾರ್ಯನು ಅಧಿಪತಿಯಾಗಿದ್ದ ತಿರುನೆಲ್ವೆಲಿಯಲ್ಲಿಯ ತೆರ್ಕುಮಠದ ಬಗೆಗೆ ಮಧುರೈ ವೀರಪ್ಪ ನಾಯಕನ ಕಾಲದ (೧೫೭೧) ಶಾಸನ ತಿಳಿಸುತ್ತದೆ (ಸಿ.ಪಿ. ೯೪೦/೧, ೩೪, ಕ್ರಿ.ಶ.

೧೫೭೧). ತಿರುನೆಲ್ವೆಲಿಯ ವೇಂಬತ್ತೂರ್‌ಮಠದ ಸ್ವಾಧೀನದಲ್ಲಿದ್ದ ಮತ್ತೊಂದು ತಾಮ್ರಪಟ ಶಾಸನವು ಶೈವಶಿಖಾಮಣಿ ಮಠದ ಅಧಿಪತಿಯಾಗಿದ್ದ ಮತ್ತು ದಕ್ಷಿಣಗೋಳಕಿ ಪೀಠಕ್ಕೆ ಅಧೀನನಾಗಿದ್ದ ಶಂಕರನಾರಾಯಣಾಚಾರ್ಯನ ಭಗೆಗೆ ಹೇಳುತ್ತದೆ. (ಸಿ.ಪಿ. ೧೯೪೦/೧, ೩೩). ಚಿದಂಬರಮ್‌ದಲ್ಲಿಯ ಭಿದಶಾಮಠದ ಅಘೋರಶಿವಾಚಾರ್ಯನ ಶಿಷ್ಯ ಪೆರುಮಾನಾಯನಾರ್ಪಂಡಾರಮ್ ಹೆಸರಿನ ಆಚಾರ್ಯನು ತಂಜಾವೂರು ಜಿಲ್ಹೆಯ ನನ್ನಿಲಮ್ ತಾಲೂಕಿನ ಶ್ರೀವಂಜಿಯಮ್‌ದಲ್ಲಿಯ ಕುದುವಂಚೆರಿಯಲ್ಲಿದ್ದ ತನ್ನ ಮಠಕ್ಕೆ ಭೂಮಿಯನ್ನು ಖರೀದಿಸಿದನು (೧೯೧೧, ೭೯ ಕ್ರಿ.ಶ. ೧೫೭೯). ಉಮ್ಮೈಯೋರುಭಾಗ-ಮುದಲಿಯಾರ್-ಪಂಡಾರಮ್‌ನ ಶಿಷ್ಯ ಆಂಡುಗೊಂಡ ನಾಯನಾರ್‌ನನ್ನು ಮತ್ತು ಅವನ ಪಕ್ಷದವರನ್ನು ತಿರುನೆಲ್ವೆಲಿ ಜಿಲ್ಹೆಯ ಶಿವಶೈಲಮ್‌ದಲ್ಲಿ ಮಡಾಪಟ್ಟಿಯಮ್ (ಸನ್ಯಾಸಿಮಠ ಮತ್ತು ಅದಕ್ಕೆ ಹೊಂದಿದ ದೇವಾಲಯದ ಆಡಳಿತ) ನಿರ್ವಹಣೆಗಾಗಿ ನೇಮಿಸಲಾಗಿತ್ತು (೧೯೧೬, ೫೨೦, ಕ್ರಿ.ಶ. ೧೫೪೭).

ತಿರುಪ್ಪಣವಾಶಲ್ ಮುದಲಿಯಾರ್‌ನು ೧೬ನೇ ಶತಮಾನದಲ್ಲಿ ಒಬ್ಬ ಪ್ರಭಾವೀ ಆಚಾರ್ಯನಾಗಿದ್ದನೆಂದು ತೋರುತ್ತದೆ. ಅವನು ಚಿದಂಬರಮ್‌ದ ಪಶ್ಚಿಮ ಓಣಿಯಲ್ಲಿಯ ವೆಲ್ಲೈಕ್ಕವಲನ್ ಮಠದಲ್ಲಿ ವಾಸಿಸುತ್ತಿದ್ದನು. ರಾಮನಾಥಪುರಮ್ ಜಿಲ್ಹೆಯ ಕೊವಿಲೂರ್ ಮತ್ತು ಕನ್ನಕುಡಿ ಗ್ರಾಮಗಳಲ್ಲಿ ದೊರೆತ ನಾಲ್ಕು ಶಾಸನಗಳು ಅವನಿಗೆ ಕೊಡಲಾದ ಭೂಮಿ ಮತ್ತು ಗ್ರಾಮಗಳ ದತ್ತಿಯ ಬಗೆಗೆ ಹೇಳುತ್ತವೆ (೧೯೫೪/೫, ೩೯೯, ಕ್ರಿ.ಶ. ೧೫೧೫, ೧೯೬೨/೩, ೫೨೫, ಕ್ರಿ.ಶ. ೧೫೧೫, ೧೯೬೨/೩, ೫೩೨, ೫೨೪). ರಾಮನಾಥಪುರಮ್ ಜಿಲ್ಹೆಯ ತಿರುಪುತ್ತೂರ್ ಮತ್ತು ಪಿರನ್ಮಲೈಗಳಲ್ಲಿ ದೊರೆತ ಬೇರೆ ಎರಡು ಶಾಸನಗಳು ಕಲ್ಲುಮಠದ ಈಶಾನಶಿವನ ಬಗೆಗೆ ಹೇಳುತ್ತವೆ (೧೯೩೫/೬, ೧೭೮ ಕ್ರಿ.ಶ. ೧೫೦೪, ೧೯೨೪, ೧೯೩ ಕ್ರಿ.ಶ. ೧೫೩೧). ರಾಮನಾಥಪುರಮ್ ಜಿಲ್ಹೆಯ ಅರಬತ್ತುಮೂವನ್ ಮಠದ ಅಧಿಪತಿ ಸ್ವಾಮಿಯಾದ 'ಪಾಂಡಿನಾಟ್ಟು ಮುದಲಿಯಾರ್' ಎಂಬ ಮತ್ತೊರ್ವ ಆಚಾರ್ಯನನ್ನು ೧೯೨೪ರ ವರದಿಯ ಕ್ರಿ.ಶ. ೧೫೦೧ ರ ಶಾಸನ ೨೧೩ ಉಲ್ಲೇಖಿಸುತ್ತದೆ.

ತಿರುನೆಲ್ವೆಲಿಯ ನೆಲ್ಲಿಯುಪ್ಪರ್ ದೇವಾಲಯದ ಗೋಡೆಗಳ ಮೇಲೆ ದೊರೆತ ಸುಂದರ ಪಾಂಡ್ಯನ ಕಾಲದ ದಿನಾಂಕರಹಿತ ಶಾಸನವು ಭಿಕ್ಷಾಮಠದ ಪಶುಪತಿರಾವಳರ್‌ನ ಶಿಷ್ಯರು ನಿರೈಂಗೈ ಆಡುವಾನ್, ಕಲ್ಲಿಕ್ಕಡಿಂದಕೈಯನ್ ಮತ್ತು ತಿರುಜ್ಞಾನಸಂಬಂಧನ್‌ರನ್ನು ಹೆಸರಿಸುತ್ತದೆ (೧೮೯೪, ೧೩೧, ೧೩೨;೫೧೧v Nos. ೪೨೦, ೪೨೧). ಈ ಪಶುಪತಿರಾವಳರ್ ಗೋಳಕಿವಂಶದ ಲಕ್ಷಾಧ್ಯಾಯಿ ಸಂತಾನಕ್ಕೆ ಸೇರಿದ ೧೯೨೮/೯ ರ ವರದಿಯ ಶಾಸನ ೪೮ರಲ್ಲಿ ಬರುವ ಪಶುಪತಿರಾವಳರ್‌ನೇ ಆಗಿರುವ ಸಾಧ್ಯತೆಯಿದೆ.

**೨. ಜ್ಞಾನಾಮೃತಾಚಾರ್ಯ ಗುರುಪರಂಪರೆ:**

ಈ ಗುರುಪರಂಪರೆಗೆ ಸಂಬಂಧಿಸಿದ ಮಾಹಿತಿಯನ್ನೊಳಗೊಂಡ ಎಲ್ಲ ಶಾಸನಗಳು ೧೩ನೇ ಶತಮಾನಕ್ಕೆ ಸೇರಿದ್ದು, ಅವೆಲ್ಲ ತಿರುನೆಲ್ವೆಲಿ ಜಿಲ್ಹೆಯ ಅಂಬಿಸಮುದ್ರಮ್ ತಾಲೂಕಿನ

ತಿರುವಲೀಶ್ವರಮ್ ಊರಿನ ವಲೀಶ್ವರ ದೇವಾಲಯದ ಗೋಡೆಯ ಮೇಲೆ ಬರೆದುವು ಮತ್ತು ಒಂದೇ ತೆರನಾದುವು ಆಗಿರುತ್ತವೆ. ಈ ಮಠದ ವಂಶಾವಳಿಯು ಗೋಳಕಿಯ ಮುಖ್ಯ ವಂಶವಾಹಿನಿಗೆ ಅಧೀನವೆಂಬುದು ೧೯೧೬ರ ವರದಿಯ ಶಾಸನ ೩೫೯, ೩೬೧ ಮತ್ತು ೩೬೪ಗಳಿಂದ ಸ್ಪಷ್ಟವಾಗುತ್ತದೆ. ಅಘೋರದೇವ ಉರುಫ್ ಸೋಳನ್‌ಶೀಯನ್‌ನು ಗೋಳಕಿಮಠದ ಜೀಯರ್ ಸಂತಾನಕ್ಕೆ ಸೇರಿದವನೆಂದು ಮರವರ್ಮನ್ ಸುಂದರ ಪಾಂಡ್ಯನ ಶಾಸನಗಳಲ್ಲಿ ಹೇಳಲಾಗಿದೆ (೧೯೧೬, ೩೫೮). ತತ್ಪುರುಷದೇವನೆಂಬ ಇನ್ನೊಬ್ಬ ಬೋಧಕನೂ ಇದ್ದನೆಂದು ೧೯೧೬ರ ವರದಿಯ ಶಾಸನ ೩೫೮ರಲ್ಲಿ ಹೇಳಲಾಗಿದೆ. ಜಟಾವರ್ಮನ್ ವೀರಪಾಂಡ್ಯನ ಎರಡು ಶಾಸನಗಳಲ್ಲಿ ಇದೇ ಅಘೋರದೇವನ ಹೆಸರು ಪುನಃ ಸ್ಪಷ್ಟವಾಗಿ ಕಾಣಿಸಿಕೊಂಡಿದೆ. ಮತ್ತು ಈ ಆಚಾರ್ಯನು ಜ್ಞಾನಾಮೃತಾಚಾರ್ಯವಂಶಕ್ಕೆ ಸೇರಿದವನೆಂದು ಅವುಗಳಲ್ಲಿ ಹೇಳಲಾಗಿದೆ (೧೯೧೬, ೩೫೯, ೩೬೧). ಹೀಗೆ ಜೀಯರ್ ಸಂತಾನ ಮತ್ತು ಜ್ಞಾನಾಮೃತಾಚಾರ್ಯ ಸಂತಾನ ಒಂದೇ ಸಂತಾನದ ಹೆಸರುಗಳಾಗಿದ್ದಂತೆ ತೋರುತ್ತದೆ. ಪ್ರಸ್ತುತ ಶಾಸನಗಳು ಈ ವಂಶಗಳು ಗೋಳಕಿವಂಶಕ್ಕೆ ಅಧೀನವಾಗಿದ್ದವೆಂಬುದನ್ನು ಇನ್ನೂ ದೃಢೀಕರಿಸುತ್ತವೆ. ಪುಕಳಿಪ್ಪೆರುಮಾಳ್‌ನೆಂಬ ಆಚಾರ್ಯನು ತಿರುವಲೀಶ್ವರಮ್‌ದಲ್ಲಿಯ ವಲೀಶ್ವರದೇವಾಲಯದಲ್ಲಿ "ತಿರುಜ್ಞಾನಮ್" ಗ್ರಂಥ ಕುರಿತು ಮಾಡಿದ ವ್ಯಾಖ್ಯಾನಕ್ಕೆ ಪ್ರತಿಯಾಗಿ (ಸಂಭಾವನೆಯಾಗಿ) ಸ್ವಲ್ಪ ಭೂಮಿಯನ್ನು ದಾನವಾಗಿ ಪಡೆದನೆಂದು ೧೯೧೬ರ ವರದಿಯ ಶಾಸನ ೩೫೯ ಹೇಳುತ್ತದೆ. (ಹೆಚ್ಚಿನ ವಿವರಗಳಿಗಾಗಿ ಸ್ವಾಮಿ, ೧೯೭೧ ನೋಡಿ).

**೩. ತಿರುಚತ್ತಿಮುರ್‍ರಮ್ ಗುರುಪರಂಪರೆ:**

೧೩ನೇ ಶತಮಾನದಲ್ಲಿ ಕೇಳಿಬರುತ್ತಿರುವ ಈ ಗುರು ಪರಂಪರೆ ತಂಜಾವೂರು ಜಿಲ್ಲೆಗೆ ಸೀಮಿತವಾಗಿದ್ದು, ಇದಕ್ಕೆ ಸಂಬಂಧಿಸಿದ ಬಹಳಷ್ಟು ಶಾಸನಗಳು ಮೂರನೆಯ ರಾಜರಾಜ ಮತ್ತು ಮೂರನೆಯ ರಾಜೇಂದ್ರರ ಅವಧಿಗೆ ಸಂಬಂಧಿಸಿವೆ. ಅಲಗಿಯ ತಿರುಚಿರ್‍ರಂಬಲ್-ಮುದಲಿಯಾರ್ ಮಠ ಮತ್ತು ತಿರುಜ್ಞಾನಸಂಬಂಧ ಮಠ (೧೯೦೮, ೩೯೨), ತವಪ್ಪೆರುಮಾಳ್‌ಮಠ (೧೯೧೧, ೧೦೮, ೧೦೯) ಮತ್ತು ಕೂತ್ತಾಡುಮ್‌ನಾಯನಾರ್ ಮಠ (೧೯೦೮, ೨೧೮) ಈ ಆಚಾರ್ಯ ಪರಂಪರೆಗೆ ಸೇರಿದ್ದವು. ಇದೂ ಅಲ್ಲದೆ ಕುತ್ತಲಮ್ (೧೯೦೭, ೪೯೫) ಮತ್ತು ಅಗತ್ತಿನಪಲ್ಲಿ (೧೯೦೪, ೫೦೪A)ಯಲ್ಲಿದ್ದ ನಾಮ ನಿರ್ದೇಶನವಿಲ್ಲದ ಎರಡೂ ಸನ್ಯಾಸಿಮಠಗಳು ತಂಜಾವೂರು ಜಿಲ್ಲೆಗೆ ಸಂಬಂಧಿಸಿದ್ದು, ಇವುಗಳ ಆಚಾರ್ಯರ ಹೆಸರು ಕೆಳಗಿನಂತಿವೆ:

೧. ಜ್ಞಾನಶಿವ ೧೯೦೮, ೩೯೩
೨. ಸೋಮನಾಥದೇವ-ಮುದಲಿಯಾರ್ ೧೯೧೧, ೧೦೮, ೧೦೯. ೧೯೦೪, ೫೧೩
೩. ಈಶಾನಶಿವಾಚಾರ್ಯ ೧೯೦೮, ೨೨೦
೪. ಪರಿಪೂರ್ಣಶಿವಾಚಾರ್ಯ ೧೯೦೮, ೨೧೮

ಈ ವಂಶಪರಂಪರೆಯು ಮೊದಲನೆಯ ಕುಲೋತ್ತುಂಗನ ಆಳಿಕೆಯಲ್ಲಿ ತಿರುವವದುತುರೈಯಲ್ಲಿ ನಾರಪತ್ತೆಣ್ಣಾಯಿರವನ್‌ಮಠವೆಂಬ ಸನ್ಯಾಸಿ ಶಾಖಾಮಠವನ್ನು ಹೊಂದಿತ್ತು (೧೯೨೫, ೧೫೦, ಕ್ರಿ.ಶ. ೧೧೧೧). ತಿರುಚಿ ಜಿಲ್ಲೆಯ ತಿರುಸ್ಸೈಕ್ಕ (ಜಂಬುಕೇಶ್ವರಮ್)ದಲ್ಲಿ ದೊರೆತ ಬಹುಶಃ ೧೩ನೇ ಶತಮಾನದ ದಿನಾಂಕರಹಿತ ಎರಡು ಶಿಲಾಶಾಸನಗಳು ಅಲ್ಲಿದ್ದ ಅದೇ ಹೆಸರಿನ ಮಠವೊಂದನ್ನು ಉಲ್ಲೇಖಿಸುತ್ತವೆ (೧೯೦೮, ೪೮೬, ೪೮೭). ಆವೂರುಡೈಯಾನ್ ಶೋಳಕೋನ್‌ನು ಈ ಮಠವನ್ನು ಕಟ್ಟಿಸಿದನೆಂದೂ, ಅದರ ಉದ್ದೇಶ ಯತಿಗಳನ್ನು ಉಣಿಸುವುದಾಗಿದ್ದಿತೆಂದೂ ಅಲ್ಲಿ ದಾಖಲಿಸಲಾಗಿದೆ. ಈ ಮಠಗಳ ಅಧಿಪತಿಗಳು ತಿರುಚ್ಚತ್ತಿಮುರ್ರಮ್ ವಂಶ ಪರಂಪರೆಗೆ ಸೇರಿದ್ದರೆಂಬುದು ಮಹತ್ವದ ಸಂಗತಿಯಾಗಿದೆ. ನಮಶ್ಶಿವಾಯದೇವರ್ ಎಂಬವನು ತಿರುವನೈಕ್ಕವಲ್‌ದಲ್ಲಿದ್ದ ನಾರಪೆತ್ತೆಣ್ಣಾಯಿರವನ್ ಮಠದ ಅಧಿಪತಿಯಾಗಿದ್ದನು (AREಭಾಗ-೨, ಪ್ಯಾರಾ ೫೩).

**೪. ನಂದಿಕೇಶ್ವರ ಗುರುಪರಂಪರೆ :**

ಈ ಗುರುಪರಂಪರೆಗೆ ಸೇರಿದ ಸನ್ಯಾಸಿ ಮಠಗಳು ಮದುರೈ ಜಿಲ್ಲೆಯ ವಿಶಪಂದಿಯಲ್ಲಿ (ಆಮುಂಡಮಠ, ೧೯೦೭, ೪೨೨), ಚೆಂಗಲ್‌ಪೇಟ್ ಜಿಲ್ಲೆಯ ತಿರುವೊರಿಯುರ್‌ಯಲ್ಲಿ (ನಂದಿಕೇಶ್ವರಮಠ, ೧೯೧೨, ೨೪೯) ಮತ್ತು ವೇದಗಿರಿ ವಾರಣಾಸಿ ಪತ್ತಿನಮ್‌ದಲ್ಲಿ (ಮಾನಂಪೆರಿಯಾನ್ ಮಠ, ೧೯೧೧, ೫೬೦) ಇದ್ದವು, ಮತ್ತು ಅನುಕ್ರಮವಾಗಿ ಅಘೋರದೇವ, ಅರಿಯವೃತಂಕೊಂಡ-ಮುದಲಿಯಾರ್ ಮತ್ತು ಜ್ಞಾನಾಮೃತದೇವ ಆಚಾರ್ಯರು ಈ ಮಠಗಳೊಂದಿಗೆ ಸಂಬಂಧಹೊಂದಿದ್ದರು.

ನಂದಿಕೇಶ್ವರ ಸಂತಾನವು ಆಮುಂಡಮಠವೆಂದು ಕರೆಯಲಾದ ವಂಶಪರಂಪರೆಗೆ ಸೇರಿದುದೆಂದು ಹೇಳಲಾಗುತ್ತಿದೆ. ಆಮುಂಡಮಠ ಹೆಸರು ಆಮರ್ದಕಮಠ ಹೆಸರಿನ ಬದಲಿ ರೂಪವಾಗಿದ್ದರೆ, ಮಹಾಗಣಪತಿಭಟ್ ಉರುಫ್ ಸ್ವಾಮಿದೇವರ್‌ನೇ (೧೯೧೭, ೪೬೫) ಆಗಿರಬಹುದಾದ ಮಹಾಗಣಪತಿ ನಾಯನಾರ್‌ನು (೧೯೧೭, ೫೪೯)ಕೂಡ ಅದೇ ಗುರುಪರಂಪರೆಗೆ ಸೇರಿರಬೇಕಾಗುತ್ತದೆ. ೧೫ನೇ ಶತಮಾನದ ಈ ಎರಡು ಶಾಸನಗಳು ಅವನನ್ನು ಉತ್ತರಾಪಥದಲ್ಲಿ ಗಂಗಾನದಿಯ ದಡದ ಮೇಲಿರುವ ಗೌಡರಾಷ್ಟ್ರದೊಳಗಿನ ರಾಢಾವರೇಂದಿಗ್ರಾಮ ಎಂಬ ಹಳ್ಳಿಯಲ್ಲಿದ್ದ ಆಮರ್ದಾಶ್ರಮಕ್ಕೆ ಸಂಬಂಧ ಕಲ್ಪಿಸುತ್ತವೆ. ಅದೂ ಅಲ್ಲದೆ ಅವನು ಆಮರ್ದಾಶ್ರಮಾಚಾರ್ಯವಂಶದ ಆಚಾರ್ಯನೆಂದು ಕೂಡ ಹೇಳಲಾಗುತ್ತದೆ (೧೯೧೭, ೫೪೯) ಆಮರ್ದಾಶ್ರಮಾಚಾರ್ಯ ಹೆಸರು ಮತ್ತಮಯೂರ ಪಂಗಡದ ರುದ್ರಶಿವ (ಆಮರ್ದಕ ತೀರ್ಥನಾಥ)ನು ಸ್ಥಾಪಿಸಿದ ಆಶ್ರಮವನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ರಾಢಾ ಮತ್ತು ವರೇಂದ್ರಿ ಆಧುನಿಕ ಬಂಗಾಲದ ಪ್ರಾಚೀನ ಭೌಗೋಲಿಕ ವಿಭಾಗಗಳಾಗಿದ್ದವು (E1, XX1, No. 37), ಶಾಸನತಜ್ಞ ಮಿರಾಶಿ (೧೯೫೫)ಯವರು ಆಮರ್ದಕದ ಸ್ಥಳವು ಮಾಳ್ವದೇಶದಲ್ಲಿ ಇದ್ದಿತೆಂದು ಹೇಳುತ್ತಾರೆ.

**೫. ಕೀಳೈಮಠ ಗುರುಪರಂಪರೆ :**

ಈ ವಂಶಪರಂಪರೆಯ ಬೋಧಕರನ್ನು ಮುದಲಿಯಾರ್‌ರೆಂದು ಕೂಡ ಕರೆಯುತ್ತಿದ್ದರು. ಇವರು ತಂಜಾವೂರು ಜಿಲ್ಹೆಯ ತಿರುವರೂರ್ (ಸೆಲ್ವ-ತಿರುವರೂರ್)ದಲ್ಲಿಯ ಸನ್ಯಾಸಿಮಠಕ್ಕೆ ಸಂಬಂಧಿಸಿದವರು. ಅದೇ ಊರಲ್ಲಿರುವ ವಡಕ್ಕೀಳ್ ಮಠವು (೧೯೨೬, ೧೬೯) ಕೀಳೈಮಠವೇ ಆಗಿರಬಹುದು. ಏಕೆಂದರೆ ಆ ಮಠದ ಆಚಾರ್ಯ ವಾಗೀಶಪ್ಪೆರುಮಾಳ್‌ನು ಮುದಲಿಯಾರ್ (ಮುದಲಿಯಾರ್ಪಿಳ್ಳೈ ವಾಗೀಶಪ್ಪೆರುಮಾಳ್) ಗುಂಪಿಗೆ ಸೇರಿರುವನು. ಈ ವಂಶ ೧೩ನೇ ಶತಮಾನದಲ್ಲಿ ಮದುರೈ, ತಂಜಾವೂರು, ದಕ್ಷಿಣ ಆರ್ಕಾಟ ಮತ್ತು ತಿರುನೆಲ್ವೆಲಿಗಳಲ್ಲಿ ವ್ಯಾಪಕವಾಗಿ ಹರಡಿದ್ದಿತು. ಈ ಮಠಗಳೊಂದಿಗೆ ಸಂಬಂಧ ಹೊಂದಿದ್ದ ಆಚಾರ್ಯರು ಹೀಗಿದ್ದಾರೆ:

೧. ಕಯಿಲಾಯದೇವನ್ ಉರುಫ್ ಶಿವದೇವ, ವಿಕ್ಕಿರಮಂಗಲಮ್, ಮದುರೈ ಜಿಲ್ಹೆ (೧೯೨೬, ೬೧೭).

೨. ವಾಮಶಿವ ಮುದಲಿಯಾರ್, ತಿರುವೈಗವುರ್, ತಂಜಾವೂರು ಜಿಲ್ಲೆ (೧೯೧೪, ೫೬).

೩. ಮುದಲಿಯಾರ್ಪಿಳ್ಳೈ ವಾಗೀಶಪ್ಪೆರುಮಾಳ್, ಪಮನಿ, ತಂಜಾವುರು ಜಿಲ್ಹೆ (೧೯೨೬, ೧೬೯).

೪. ವಾಗೀಶ್ವರದೇವ, ಚಿದಂಬರಮ್, ದಕ್ಷಿಣ ಆರ್ಕಾಟ ಜಿಲ್ಹೆ (೧೯೨೦, ೪೮೩)

೫. ಪುರಪ್ಪವಳ ಶಿವ ಮುದಲಿಯಾರ್, ಸೆರ್ಮದೇವಿ, ತಿರುನೆಲ್ವೆಲಿ ಜಿಲ್ಹೆ (೧೯೧೬, ೬೫೨).

೬. ತಿರುಮತ್ತಪ್ಪೆರುಮಾನ್, ಶಿವಪಾದ ಹೃದಯನ ಶಿಷ್ಯ, ತಿರುವಾರೂರ್, ತಂಜಾವೂರು ಜಿಲ್ಹೆ (೧೮೯೪, ೧೩೧, ೧೩೨).

೭. ವಂದನದೇವ, ಅಸ್ತ್ರದೇವನ ಶಿಷ್ಯ

ಈ ಆಚಾರ್ಯರು, ಸುಂದರಪಾಂಡ್ಯನ ಶಾಸನದ ಪ್ರಕಾರ ಗೋಳಕಿವಂಶದ ಮುಖ್ಯವಾಹಿನಿಯೊಂದಿಗೆ ಸಂಬಂಧಹೊಂದಿದ್ದಾರೆ. ಈ ಶಾಸನವು ಗೋಳಕಿಮಠದ ಅಧೀನವಾಗಿರುವ ತಿರುಪ್ಪರಂಕುನ್ರಮ್‌ದಲ್ಲಿಯ ಕೀಳೈಮಠದ ಶಿಷ್ಯ ಅಳಗಿಯ ತಿರುಚ್ಚಿರ್ರಂಬಲಮ್-ಉದೈಯಾರ್ ಎಂಬ ಆಚಾರ್ಯನನ್ನು ಹೆಸರಿಸುತ್ತದೆ (ಮದುರೈ, ೪೦೩, ರಂಗಾಚಾರ್ಯ. ಕೀಳೈಮಠವು ತಿರುನೆಲ್ವೆಲಿ ಜಿಲ್ಹೆಯ ಸೆರ್ಮದೇಯಲ್ಲಿ ದೊರೆತ ಶಾಸನ (೧೯೧೬, ೬೫೭ ಕ್ರಿ.ಶ. ೧೨೬೦) ಮತ್ತು (೧೮೯೪, ೧೩೧(S11 V No. ೪೨೦) ಶಾಸನಗಳಲ್ಲಿಯೂ ಕಾಣಿಸಿಕೊಂಡಿದೆ. ಇವುಗಳಲ್ಲಿಯ ಎರಡನೇ ಶಾಸನವು ಗೋಳಕಿ (ಭಿಕ್ಷಾ)ಪಂಥಕ್ಕೆ ಅಧೀನವಾಗಿದ್ದ ತೆರ್ಕಿಲ್‌ಮಠವು ತಿರುನೆಲ್ವೆಲಿಯಲ್ಲಿ ಇದ್ದುದನ್ನು ದಾಖಲಿಸಿದೆ. ಕೀಳೈಮಠದ ವಂಶಪರಂಪರೆಯು ಕೂಡ ಸುಮಾರು ೧೩ನೇ ಶತಮಾನದ ತಿರುನೆಲ್ವೆಲಿಯಲ್ಲಿ ದೊರೆತ ಪಾಂಡ್ಯ ಶಾಸನಗಳಲ್ಲಿ ಉಲ್ಲೇಖಿಸಲ್ಪಟಿದೆ (೧೮೯೪, ೧೩೧).

**೬. ಮೆಯ್ಕಂಡರ್ ಗುರು ಪರಂಪರೆ:**

ಈ ವಂಶಪರಂರೆಯ ವಿಷಯ ಪ್ರಥಮ ಬಾರಿಗೆ ತಿಳಿದು ಬರುವುದು ೧೫ನೇ ಶತಮಾನದ ಶಾಸನದಲ್ಲಿ. ರಾಮನಾಥಪುರಮ್ ಜಿಲ್ಲೆಯ ತಿರುಪುತ್ತೂರ್ ಊರಲ್ಲಿಯ ತಿರುತ್ತಲೀಶ ದೇವಾಲಯದಲ್ಲಿ ದೊರೆತ ಶಾಸನವು, ಆ ಊರ ಮಠದಲ್ಲಿ ವಾಸಿಸುತ್ತಿದ್ದ ಮೆಯ್ಕಂಡರ್‌ವಂಶದ ತಿರುವಂಬಲ ಮುಡೈಯಾರ್ ಮರಿಯಜ್ಞಾನಸಂಬಂದರ್ ಎಂಬವನು **ಓಂಗುಕೋಯಿಲ್‌ಪುರಾಣಮ್** ಮಹಾಕಾವ್ಯವನ್ನು ರಚಿಸಿದ್ದಕ್ಕಾಗಿ ದೇವಾಲಯಕ್ಕೆ ಸೇರಿದ ಭೂಮಿಯಲ್ಲಿ ಒಂದಿಷ್ಟನ್ನು (ನಿರ್ದಿಷ್ಟಪ್ರಮಾಣದ) ದಾನಪಡೆದನೆಂದು ಹೇಳುತ್ತದೆ (೧೯೩೫, ೧೮೦, ಕ್ರಿ.ಶ. ೧೪೮೪). ಈ ಶಾಸನದಲ್ಲಿ ಉಲ್ಲೇಖಿಸಿದ ಮಠವೂ ಮತ್ತು ೨೫ ವರ್ಷಗಳ ನಂತರ ಅದೇ ದೇವಾಲಯದಲ್ಲಿ ಕೆತ್ತಲಾದ ಮತ್ತೊಂದು ಶಾಸನದಲ್ಲಿ ಉಲ್ಲೇಖಿಸಿದ ಮಠವೂ ಒಂದೇ ಆಗಿದ್ದರೆ— ಒಂದೇ ಆಗಿರುವ ಸಾಧ್ಯತೆ ಅಧಿಕವೆಂದು ತೋರುತ್ತದೆ—ಆ ಮಠವನ್ನು ಗೋಳಕಿಪಂಥಕ್ಕೆ ಸೇರಿಸಲು ಸ್ಪಷ್ಟ ಆಧಾರ ಸಿಗುತ್ತದೆ. ಏಕೆಂದರೆ, ಎರಡನೆಯ ಶಾಸನವು ಆ ಮಠದಲ್ಲಿ ವಾಸಿಸುತ್ತಿದ್ದ ಲಕ್ಷಾಧ್ಯಾಯಿ ವಂಶಪರಂಪರೆಗೆ ಸೇರಿದ ಈಶಾನಶಿವ ಆಚಾರ್ಯನನ್ನು ಹೆಸರಿಸುತ್ತದೆ (೧೯೩೫/೬, ೧೭೮, ಕ್ರಿ.ಶ. ೧೫೦೪).

ತಿರುವಣ್ಣಾಮಲೈಯಲ್ಲಿಯ ಮೆಯ್ಕಂಡರ್ ವಂಶದ ಸತ್ಯಜ್ಞಾನದರ್ಶನಿಯ ಶಿಷ್ಯ ತಿರುಮಲೈ ನಾಯನಾರ್ ಚಂದ್ರಶೇಖರನು **ಇರಶೈಪ್ಪುರಾಣಮ್** ಹೆಸರಿನ ಮತ್ತೊಂದು ಮಹಾಕಾವ್ಯ ರಚಿಸಿದುದಕ್ಕಾಗಿ ಭೂದತ್ತಿ ಸ್ವೀಕರಿಸಿದನು (೧೯೩೭/೮, ೪೮೫, ಕ್ರಿ.ಶ. ೧೫೫೧). ಮಠದ ಲೆಖ್ಖಪತ್ರ ಸರಿಯಾಗಿ ಇಡುವುದು, ದೇವತಾ ವಿಗ್ರಹದೆದುರು ಸ್ತೋತ್ರಗಳನ್ನು ಹೇಳುವ ಏರ್ಪಾಡುಮಾಡುವುದು ಮತ್ತು ದೇವರಿಗೆ ಹೂವಿನ ಹಾರಗಳನ್ನು ಒದಗಿಸುವ ಮೇಲ್ವಿಚಾರಣೆ ಮಾಡುವುದು—ಈ ಎಲ್ಲ ಕೆಲಸಗಳನ್ನು ಈ ವಂಶದ ಶಿಷ್ಯನಾದ ಪಟ್ಟೈಪ್ಪೆರುಮಾಳ್ ಧನ್ಮಕೂತ್ತನ್‌ನಿಗೆ ಒಪ್ಪಿಸಲಾಗಿತ್ತು (೧೯೩೫/೬, ೨೦೨, ಕ್ರಿ.ಶ. ೧೫೪೬). ಕಾಂಚಿಪುರಮ್‌ದ ಜ್ಞಾನದೇಶಿಕ ಎಂಬವನ ಶಿಷ್ಯ ಮೆಜ್ಞಾನ-ಮಾಮುನಿ ಹೆಸರಿನ ಆಚಾರ್ಯನು ಈ ವಂಶದ ಮತ್ತೊಬ್ಬ ಸದಸ್ಯನೆಂದು ಹೇಳಲಾಗಿದೆ (೧೯೩೬/೭, ೨೦೭, ಕ್ರಿ.ಶ. ೧೫ನೇ ಶತಮಾನ).

ಮೇಲೆ ಉಲ್ಲೇಖಿಸಿದ ಆಚಾರ್ಯರ ಹೆಸರುಗಳಲ್ಲಿ, ಮಠಾಧಿಪತಿ ಮರೈಜ್ಞಾನ ಸಂಬಂಧನ (ಮೇಲಿನ ಪ್ಯಾರಾದಲ್ಲಿ ಹೇಳಲಾದ ವ್ಯಕ್ತಿಗಿಂತ ಸ್ಪಷ್ಟವಾಗಿ ಭಿನ್ನವಿರುವ) ಹೆಸರು ೧೩ನೇ ಶತಮಾನದ ಶಾಸನವೊಂದರಲ್ಲಿ ಕಾಣಿಸಿಕೊಳ್ಳುತ್ತದೆ. ಹಾಗೇ ಮತ್ತೊಬ್ಬ ಸತ್ಯದರ್ಶನಿಯ ಹೆಸರೂ ಕ್ರಿ.ಶ. ೧೩೮೨ರ (೧೯೦೪, ೬೪೨) ಶಾಸನದಲ್ಲಿ ಸಿಗುತ್ತದೆ. ಪರಿಯನಾಟ್ಟುಮಠವನ್ನು ದತ್ತಿಯಾಗಿ ಪಡೆದ ನಲ್ಲೂರಿನ ಮೆಯ್ಕಂಡ ನಾಯನಾರ್‌ನ ಹೆಸರು 1916ರ ವರದಿಯ ಶಾಸನ ೩೮೦ರಲ್ಲಿ ಬರುತ್ತದೆ (S. ೧೫೯೦, ಕೊಲ್ಲಮ್ ೮೪೦). ಈ ಆಚಾರ್ಯರನ್ನು ಅಧಿಕೃತವಾಗಿ ಮೆಯ್ಕಂಡರ್ ವಂಶಕ್ಕೆ ಸೇರಿಸುವುದು ಕಷ್ಟದ ಕೆಲಸ. ಹಾಗೇ ಕೆಲವು ಲೇಖಕರಿಂದ ಪುನಃ ಪುನಃ ಈ ವಂಶಕ್ಕೆ ಸೇರಿಸಲ್ಪಡುವ ಶಿವಪ್ರಕಾಶನೆಂಬ ಆಚಾರ್ಯನೂ (ಅನನ್, ೧೯೬೨, ಅರುಣಾಚಲ ಗೌಂಡರ, ೧೯೬೪) ೧೯೩೫/೬ ವರದಿಯ ೧೯೪ ಮತ್ತು

೧೭೩ ಶಾಸನಗಳಲ್ಲಿ ಕಾಣಿಸಿಕೊಳ್ಳುವ ಆಚಾರ್ಯನೂ ಒಂದೇ ಆಗಿದ್ದರೆ, ಅವನು ಗೋಳಕಿಪಂಥದ ಲಕ್ಷಾಧ್ಯಾಯಿ ವಂಶದ ಭಿಕ್ಷಾಮಠಕ್ಕೆ ಸೇರಿದವನೆಂಬ ನಿರ್ಣಯಕ್ಕೆ ಬರಲೇಬೇಕಾಗುತ್ತದೆ.

**೭. ಕಡಿಮೆ ಪರಿಚಯದ ಗುರು ಪರಂಪರೆ:**

ಅತಿಕಡಿಮೆ ಮಾಹಿತಿ ಹೊಂದಿದ ಇನ್ನೂ ಕೆಲವು ವಂಶಪರಂಪರೆಗಳ ಬಗೆಗೂ ಶಾಸನಗಳು ಹೇಳುತ್ತವೆ. ಆದರೆ ಅವೆಲ್ಲ ಗೋಲಕಿಪಂಥಕ್ಕೆ ಸೇರಿದ್ದವೆಂಬುದಕ್ಕೆ ಖಚಿತ ಆಧಾರಗಳಿರುವುದಿಲ್ಲ. ಹೀಗಿದ್ದೂ ಅವುಗಳಲ್ಲಿ ಕೆಲವು ಗೋಲಕಿಪಂಥಕ್ಕೆ ಸೇರಿರುವ ಸಾಧ್ಯತೆಯನ್ನು ಸೂಚಿಸುತ್ತವೆ. ವಿಷಕಂಟದೇವರ್ ಮತ್ತು ಭಟ್ಟವೀರ ವಂಶಗಳ ವಿಷಯ ಎಲ್ಲರಿಗೂ ತಿಳಿದಿರುವಂತಹದ್ದು. ಎಲ್ಲೈಯಿಲ್ಲಾದ ದೇವರ್‌ನ ಶಿಷ್ಯ ತವಪ್ಪೆರುಮಾನ್ ಎಂಬವನು ಮೊದಲನೆಯ ವಂಶಕ್ಕೆ ಸೇರಿದ್ದನು ಮತ್ತು ಮಹಾದೇವನ ಶಿಷ್ಯನಾದ ಅನಪಾಯ ಎಂಬವನು ಎರಡನೆಯ ವಂಶದ ಸದಸ್ಯನಾಗಿದ್ದನು. ಶಿವಮುತ್ತಿಕಾತ್ತನ್ (೧೮೯೪, ೧೩೧)ನು ಅಳಗಿಯನಾಯಕನ್ ವಂಶದ ಅನುಯಾಯಿ ಆಗಿದ್ದನಲ್ಲದೆ, ಉಯ್ಯಕೊಂಡ ದೇವರ್‌ನ ಶಿಷ್ಯನೂ ಆಗಿದ್ದನು. ಎಲ್ಲ ಆಚಾರ್ಯರು ತಿರುನೆಲ್ವೆಲಿಯ ಮಾಳಿಗಾಯಿಮಠದಲ್ಲಿ ವಾಸಿಸುತ್ತಿದ್ದರು. ತರ್ಕಿಲ್ ಮಠವೆಂಬ ಇನ್ನೊಂದು ಸನ್ಯಾಸಿಮಠವೂ ಅದೇ ಊರಲ್ಲಿದ್ದಿತು. ಕೀಳೈಯಿಮಠ ವಂಶದವರು ಆ ಮಠದ ಅಧಿಪತಿಗಳಾಗಿದ್ದರು. ಅವರಲ್ಲಿ ಅಣುಕ್ಕುವನ್ರಾಂದರ್‌ನ ಶಿಷ್ಯ ಅರಮಿರೈತ್ತಪ್ಪೆರುಮಾನ್‌ನೂ ಒಬ್ಬನಾಗಿದ್ದನು. ಮದುರೈಯಲ್ಲಿಯ ಇನ್ನೊಂದು ತರ್ಕಿಲ್ ಮಠದಲ್ಲಿ ನೀಲಕಂಠಶಿವನ ಶಿಷ್ಯನಾದ ತಿರುನೆಲ್ವೆಲಿ-ಉದೈಯಾನ್ ಎಂಬ ಆಚಾರ್ಯನಿದ್ದನು (೧೮೯೪, ೧೩೧, ೧೩೨, S11 V. Nos. ೪೨೦, ೪೨೧). ಪಂಡರಂಗವಾನರ್ ವಂಶಕ್ಕೆ ಸೇರಿದ ಉಮೈಯೋರುಭಾಗರ್‌ನು ಮದುರೈ ಜಿಲ್ಹೆಯ (ಸೊಲವಂಡನ್ ಸಮೀಪವಿರುವ) ತೆಂಕ್ಕರೈ ಊರಲ್ಲಿರುವ ಮೂಲನಾಥ ದೇವಾಲಯದಲ್ಲಿದ್ದ ತಿರುಜ್ಞಾನಮಠದ ಅಧಿಪತಿಯಾಗಿದ್ದನು (೧೯೧೧, ೧೨೭, ಕ್ರಿ.ಶ. ೧೨೮೧). ಆಂಡಾರ್ ಮರುಳಪ್ಪೆರುಮಾಳ್ ವಂಶಪರಂಪರೆಯು ತಿರುತೆಂಗಟ್ಟಂಕುಡಿಯಲ್ಲಿ ಇದ್ದಿತು. ಅದನ್ನು ನಮಶ್ಶಿವಾಯದೇವನ್ ಆಚಾರ್ಯನು ಪ್ರತಿನಿಧಿಸಿದನು (೧೯೨೨, ೭೬, ಕ್ರಿ.ಶ. ೧೨೩೨). ಆಂಡಾರ್-ಎಂಪಿರಾನಾರ್ ಮಠದಲ್ಲಿದ್ದ ಶೆಂಬೈಕ್ಕುಡಿ ಮುದಲಿಯಾರ್ ವಂಶದ ಉಲ್ಲೇಖವು ರಾಜೇಂದ್ರಚೋಳನ ಶಾಸನದಲ್ಲಿ ಬರುತ್ತದೆ (೧೯೦೮, ೩೮೪).

**೮. ಮುದಲಿಯಾರ್ ಎಂದು ಕರೆದುಕೊಂಡಿರುವ ಗುರು ಪರಂಪರೆ:**

ಚೋಳ ಅರಸನಾದ ಮೂರನೆಯ ಚೋಳರಾಜೇಂದ್ರ ಮತ್ತು ಪಾಂಡ್ಯ ಅರಸರಾದ ವೀರಪಾಂಡ್ಯ ಮತ್ತು ಮೊದಲನೆಯ ಕುಲಶೇಖರರ ಕಾಲದಲ್ಲಿ ಕೆತ್ತಿಸಲಾದ ಕೆಲವು ಶಾಸನಗಳು ಮುದಲಿಯಾರ್ ವಂಶಪರಂಪರೆಗೆ ಸೇರಿದ ಆಚಾರ್ಯರ ಬಗೆಗೆ ಕೆಳಗಿನಂತೆ ಹೇಳುತ್ತವೆ:

ತಿರುಚ್ಚತ್ತಿಮುಱ್ರತ್ತು-ಮುದಲಿಯಾರ್, ೧೯೦೮, ೨೧೮, ೨೨೦, ೩೯೨

ಸೋಮನಾಥದೇವ-ಮುದಲಿಯಾರ್, ೧೯೧೧, ೧೦೯

ಪಂಡರಂಗವಾನರ್ ಸಂತಾನತ್ತು-ಮುದಲಿಯಾರ್ ೧೯೧೦, ೧೨೬

ಭಿಕ್ಷಾ ಮಡತ್ತು ಮುದಲಿಯಾರ್ ೧೯೩೫/೬, ೧೬೪

ತಿರುಪ್ಪೂಣವಾಶಲ್ ಮುದಲಿಯಾರ್‌ದಂಥ ಹೆಸರಿನ ಬಳಕೆ (ಮುದಲಿಯಾರ್ ಪ್ರತ್ಯಯ ಹೊಂದಿದ ಹೆಸರಿನ ಬಳಕೆ) ವಿಜಯನಗರ ಆಳಿಕೆಯ ಅವಧಿಯಲ್ಲಿಯೂ ಮುಂದುವರೆಯಿತು (೧೯೬೨/೩, ೫೨೩-೫).

ಸಂಸ್ಕೃತದ ಆಚಾರ್ಯ ಪದಕ್ಕೆ ಬದಲಾಗಿ ಅದಕ್ಕೆ ಸಮಾನವಾದ ಗೌರವ ಸೂಚಕ ತಮಿಳು ಮುದಲಿಯಾರ್ (ಅಧಿಕಾರ ಚಲಾಯಿಸುವವ, ನಾಯಕ, ಶಿಕ್ಷಕ, ಮುಖ್ಯಸ್ಥ ಮುಂತಾದ ಅರ್ಥ ಹೊಂದಿದ ಪದ) ಪದದ ಬಳಕೆ ೧೩ನೇ ಶತಮಾನದ ಶಾಸನ ಭಾಷೆಯಲ್ಲಿ ಸಾಮಾನ್ಯವಾಗಿದ್ದಿತು. ಹಾಗೇ, ತವಪ್ಪೆರುಮಾಳ್-ಮಡತ್ತು-ಮುದಲಿಯಾರ್ (೧೯೧೧, ೧೦೮) ಎಂದರೆ ತವಪ್ಪೆರುಮಾಳ್ ಮಠಕ್ಕೆ ಸೇರಿದ ಆಚಾರ್ಯ (ಬೋಧಕ) ಎಂದಷ್ಟೇ ಅರ್ಥ. ಅದೇ ರೀತಿ, ಪಂಡರಂಗವಾನರ್-ಸಂತಾನತ್ತು-ಮುದಲಿಯಾರ್ ಪದವು ಪಂಡರಂಗವಾನರ್ ವಂಶದ ಬೋಧಕನನ್ನು ಸೂಚಿಸುತ್ತದೆ. ಆದ್ದರಿಂದ ಮುದಲಿಯಾರ್ ಪದಕ್ಕೆ ಮಧ್ಯಯುಗದ ಶಾಸನ ಭಾಷೆಯಲ್ಲಿ ಗೌರವಸೂಚಕಕ್ಕಿಂತ ಹೆಚ್ಚಿನ ಅರ್ಥವಿರುವುದಿಲ್ಲ ಮತ್ತು ಅದನ್ನು ಯಾವುದೇ ತಮಿಳು ಜನರ ಜಾತಿ, ಪಂಥ ಇಲ್ಲವೆ ಸಮುದಾಯ ಸೂಚಕವೆಂದು ಅಥವಾ ಒಂದೇ ಪ್ರದೇಶದ ಜನರನ್ನೊಳಗೊಂಡ ವಂಶಪರಂಪರೆಯ ಸೂಚಕವೆಂದು ತಿಳಿದು ಗೊಂದಲಕ್ಕೊಳಗಾಗಬಾರದು (ರಾಜಮನಿಕ್ಕಂ ೧೯೫೮). ತಮಿಳು ಶೈವಮಠಗಳನ್ನು ಗೋಳಕಿಮಠ ವಂಶಪರಂಪರೆಗಳಿಂದ ಭಿನ್ನ ಎಂದು ಗುರುತಿಸಲು ಯಾವುದೇ ತರಹದ ಆಧಾರ ಇರುವುದಿಲ್ಲ

**೯. ಗೋಳಕಿಪಂಥದ ಗುರು ಪರಂಪರೆಗಳ ಸಮಾರೋಪ**

ಶೈವಧರ್ಮದ ಗೋಳಕಿಪಂಥಕ್ಕೆ ಸೇರಿದ ಆಚಾರ್ಯರು ಉತ್ತರ ಭಾರತದಿಂದ ಆಂಧ್ರಪ್ರದೇಶ ಮತ್ತು ತಮಿಳುನಾಡಿಗೆ ವಲಸೆಬರುವುದು ಕ್ರಿ.ಶ. ೧೦ನೇ ಶತಮಾನದಲ್ಲಿ ಪ್ರಾರಂಭವಾದಂತೆ ಕಂಡುಬರುತ್ತದೆ. ಮೊದಲನೆಯ ರಾಜರಾಜನ ರಾಜಗುರುವಾದ ಈಶಾನದೇವನು ತಂಜಾವೂರಲ್ಲಿಯ ರಾಜರಾಜೇಶ್ವರಂ ದೇವಾಲಯದಲ್ಲಿ ಈ ಶತಮಾನದ ಉತ್ತರಾರ್ಧದಲ್ಲಿ ಗಟ್ಟಿಯಾಗಿ ನೆಲೆಯೂರಿದ್ದನು (S11, II Nos. ೯,೯೦,೯೧). ಈ ಅರಸನ ಉತ್ತರಾಧಿಕಾರಿಯಾದ ಮೊದಲನೆಯ ರಾಜೇಂದ್ರನು ಸರ್ವಶಿವನನ್ನು ತನ್ನ ರಾಜಗುರುವನ್ನಾಗಿ ನೇಮಿಸಿಕೊಂಡನು (S11, II, No. 20) ಮತ್ತು ಈ ಗುರುವಿನ ಅತಿ ಹತ್ತಿರದ ಶಿಷ್ಯರಿಗೆ ಮತ್ತು ಆ ಶಿಷ್ಯರ ಶಿಷ್ಯರಿಗೆ (ಪ್ರಶಿಷ್ಯರಿಗೆ)— ಎಲ್ಲರೂ ಆರ್ಯದೇಶ, ಮಧ್ಯದೇಶ ಮತ್ತು ಗೌಡದೇಶಗಳಿಂದ ಬಂದವರು—ತನ್ನ ರಾಜ್ಯದಲ್ಲಿ ನೆಲೆಸಲು ಅನುವು ಮಾಡಿಕೊಡಲು ಮುಖ್ಯ ಕಾರಣವಾದನು. ರಾಜೇಂದ್ರನು ಉತ್ತರ ಭಾರತದ ಈ ದೇಶಗಳೊಂದಿಗೆ ಸಂಬಂಧ ಇಟ್ಟುಕೊಂಡಿದ್ದ ಮತ್ತು "ತಕ್ಕಣ-ಲಾಟ" ಅರ್ಥಾತ್ ದಕ್ಷಿಣ ರಾಢವನ್ನು ಗೆದ್ದ ಸಂಗತಿಯನ್ನು ಗಮನಿಸಿದರೆ ಈ ಘಟನೆ ಅಚ್ಚರಿಪಡುವಂತಹದ್ದೇನಲ್ಲ (EI, IXಪು. ೨೮೩) ಮತ್ತೆ ಇವನ

ಪರಿಶ್ರಮದ ಫಲವಾಗಿಯೇ ಬಹುಸಂಖ್ಯೆ ಶಿವಾಚಾರ್ಯರು ತಮಿಳುನಾಡಿನಲ್ಲಿ ಪ್ರವೇಶ ಪಡೆದರು (ತ್ರಿಲೋಚನ ಶಿವಾಚಾರ್ಯನ "ಸಿದ್ಧಾಂತ ಸಾರಾವಳಿ"ಯ ಪೀಠಿಕೆಯನ್ನು ನೋಡಿ).

ತಮಿಳುನಾಡಿನಲ್ಲಿ ಗೋಳಕಿಶೈವರ ಪ್ರವೇಶ ಪ್ರಕ್ರಿಯೆ ಒಂದೇ ಸಲಕ್ಕೆ ಮುಗಿದಿರದೆ ತರುವಾಯದ ಕಾಲಾವಧಿಯಲ್ಲಿಯೂ ಮುಂದುವರಿದಂತೆ ತೋರುತ್ತದೆ. ಕೆಲವು ಶಾಸನಗಳು ಈ ಸ್ಥಿತಿಯನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ಜ್ಞಾನಶಿವ ಉರುಫ್ ಉಮಾಪತಿದೇವ ಮತ್ತು ಯಾವನೊ ಒಬ್ಬ ಗೋಸ್ವಾಮಿಮಿಶ್ರನ ಸೋದರ ಶ್ರೀಕಾಂತಶಂಭು ೧೨ನೇ ಶತಮಾನದಲ್ಲಿ ಚೆಂಗ್ಲೆಪೇಟೆ ಜಿಲ್ಲೆಯ ಅರಪಕ್ಕವಮ್‌ದಲ್ಲಿ ಮತ್ತು ತಂಜಾವೂರು ಜಿಲ್ಲೆಯ ಅಚ್ಚುತಮಂಗಲಮ್‌ದಲ್ಲಿ ನೆಲೆಸಲು ಬಂದರು (ಅನುಕ್ರಮವಾಗಿ ೧೮೯, ೨೦ ಮತ್ತು ೧೯೨೫, ೪೦೨ ಶಾಸನಗಳು). ೧೩ನೇ ಶತಮಾನದ ದಾಖಲೆಗಳು ವಲಸೆ ಬಂದವರ ಮೂಲಸ್ಥಳ ಮತ್ತು ಅವರ ಆಧೀನತೆಯ ಬಗೆಗೆ ಸ್ಪಷ್ಟವಾಗಿ ಹೇಳುತ್ತವೆ. ಉತ್ತರಾಪಥಕ್ಕೆ ಸೇರಿದ ಉತ್ತರರಾಷ್ಟ್ರದ ಉತ್ತರಾಗ್ರಹಾರದಿಂದ ಬಂದ ಸೋಮನಾಥ (ಸ್ವಾಮಿದೇವರ್)ನು ದಕ್ಷಿಣ ಆರ್ಕಾಟ ಜಿಲ್ಲೆಯ ಚಿದಂಬರದಲ್ಲಿ ನೆಲೆಸಿದನು (೧೯೩೫/೬, ೯, ಕ್ರಿ.ಶ. ೧೨೧೯); ಆರ್ಯಾವರ್ತಕ್ಕೆ ಸೇರಿದ ಲಕ್ಷಾಧ್ಯಾಯಿ ಸಂತಾನದ ಗೋಲಕಿವಂಶದ ಈಶಾನ-ಶಿವ-ರಾವಳರ್‌ನು ರಾಮನಾಥಪುರಮ್ ಜಿಲ್ಲೆಯ ಪಿರನ್ಮಲೈಯಿಯಲ್ಲಿ ಹೊಸ ನೆಲೆ (ಆಶ್ರಯ)ಯನ್ನು ಪಡೆದನು (೧೯೨೪, ೨೧೯ ಕ್ರಿ.ಶ. ೧೨೨೬); ಗಂಗೋಳಿ ಈಶ್ವರಶಿವನು ದಕ್ಷಿಣ ರಾಢಾದಿಂದ ಬಂದು ಚಿದಂಬರಮ್‌ದಲ್ಲಿ ನೆಲೆಸಿದನು (೧೯೩೪/೫, ೧೦೫, ಕ್ರಿ.ಶ. ೧೨೫೨) ಮತ್ತು ಗಂಗೋಳಿ ಜ್ಞಾನ-ಶಿವ (ಸ್ವಾಮಿದೇವರ್)ನು ಸ್ಪಷ್ಟವಾಗಿ ಅದೇ ಸ್ಥಳದವನಿದ್ದು, ದಕ್ಷಿಣ ಆರ್ಕಾಟ್ ಜಿಲ್ಲೆಯ ತಿರುನಮನಲ್ಲೂರಲ್ಲಿ ನೆಲೆ ಕಂಡುಕೊಂಡನು (೧೯೩೯/೪೦, ೨೪೨ ಕ್ರಿ.ಶ. ೧೨೩೩). ಉತ್ತರದೇಶದಲ್ಲಿಯ ಕಳರ್‌ಗ್ರಾಮಕ್ಕೆ ಸೇರಿದ ಈಶ್ವರಶಿವನು ರಾಮನಾಥಪುರಮ್ ಜಿಲ್ಲೆಯ ಅರನ್ಮನೈ-ಸಿರುವಯಲ್‌ಯನ್ನು ವಾಸಸ್ಥಳ ಮಾಡಿಕೊಂಡನು (೧೯೨೪, ೪೭, ಕ್ರಿ.ಶ. ೧೨೯೪).

ಗೋಳಕಿಪಂಥದ ಶೈವ ಆಚಾರ್ಯರಲ್ಲದೆ ಆಮರ್ದಕಾಶ್ರಮ ಪಂಥವನ್ನು ಪ್ರತಿನಿಧಿಸುವ ಶೈವ ಆಚಾರ್ಯರೂ ಸಣ್ಣ ಪ್ರಮಾಣದಲ್ಲಿ ಒಳಸೇರಿದುದು ಕುತೂಹಲಕರ ವಿಷಯವಾಗಿರುತ್ತದೆ. ಈ ಮೊದಲು ಹೇಳಿದಂತೆ ಈ ಆಮರ್ದಕಾಶ್ರಮ ಪಂಥವು ಮತ್ತಮಯೂರ ಪಂಥದ ರುದ್ರಶಿವನೆಂಬವನಿಂದ ಪ್ರಾರಂಭವಾಯಿತು. ೧೫ನೇ ಶತಮಾನದಲ್ಲಿ ತಿರುನೆಲ್ವೆಲಿ ಜಿಲ್ಲೆಯ ಕುರ್ರಾಲಮ್‌ದಲ್ಲಿ ನೆಲೆಸಿದ, ಗೌಡರಾಷ್ಟ್ರದಲ್ಲಿಯ ರಾಢಾ-ವರೇಂದಿ ಗ್ರಾಮದ ಆಮರ್ದಾಶ್ರಮದ, ಮಹಾಗಣಪತಿ* ನಾಯನಾರ್ ಎಂಬವನ ಬಗೆಗೆ ಕೇಳಬರುತ್ತದೆ (೧೯೧೭, ೪೬೫, ೫೮೯). ಮದುರೈ ಜಿಲ್ಲೆಯಲ್ಲಿ ದೊರೆತ ಎರಡು ದಿನಾಂಕರಹಿತ ದಾಖಲೆಗಳು

---

* ಈ ಸಂದರ್ಭದಲ್ಲಿ ಮಹಾಗಣಪತಿ ಪದವು ಸಿದ್ಧಿಯ ಯೋಗಸಾಧನೆಯ ಒಂದು ಸ್ಥಿತಿಯನ್ನು ಸೂಚಿಸುತ್ತದೆ. (ಕೌಂಡಿನ್ಯ ೧, ೨೭-೮ ನೋಡಿ) ಆದ್ದರಿಂದ ಈ ಪದವನ್ನು ದಕ್ಷಿಣ ಭಾರತದಲ್ಲಿ ಪ್ರಸಿದ್ಧವಿರುವ ಎಣ್ಣಾಯಕಪ್ಪಿಳ್ಳಸ್ಯಾರ್ ಎಂದು ತಪ್ಪಾಗಿ ತಿಳಿದು ಗೊಂದಲಕ್ಕೆಡೆ ಮಾಡಿಕೊಡಬಾರದು.

ಜ್ಞಾನಮೂರ್ತಿದೇವ (೧೯೧೧, ೫೬೦) ಮತ್ತು ಅಘೋರದೇವ (೧೯೦೭, ೪೨೨)ರನ್ನು ಹೆಸರಿಸುತ್ತವೆ. ಈ ಈರ್ವರೂ ಆಚಾರ್ಯರು ಆಮುಂಡಮಠಕ್ಕೆ ಸೇರಿದವರೆಂದು ಹೇಳಲಾಗುತ್ತದೆ. ಈ ಮೊದಲು ಸೂಚಿಸಿದಂತೆ, ಆಮುಂಡ್ ಪದವು ಆಮರ್ದಕದ ಅಪಭ್ರಂಶವೆಂದು ತಿಳಿದರೆ, ಗೋಳಕಿಪಂಥಕ್ಕೆ ಅದು ಅಧೀನವಾಗಿದ್ದುದು ಸ್ಥಿರಗೊಳ್ಳುತ್ತದೆ. ಆದಾಗ್ಯೂ, ಈ ಆಚಾರ್ಯ ವಂಶಪರಂಪರೆಯು ಎದ್ದುಕಾಣುವ ಪ್ರಮಾಣದಲ್ಲಿ ಪ್ರಭಾವ ಬೀರಿದಂತೆ ತೋರುವುದಿಲ್ಲ.

ಗೋಳಕಿಪಂಥ ಸ್ಥಿರತೆಯನ್ನಲ್ಲದೆ, ೧೩ನೇ ಶತಮಾನದಲ್ಲಿ ಈ ಶೈವಶಾಖೆಗಳಲ್ಲಿಯೇ ಹೆಚ್ಚಿನ ಪ್ರಮಾಣದಲ್ಲಿ ವೃದ್ಧಿ ಹೊಂದಿದ್ದಂತೆ ತೋರುತ್ತದೆ (ಚಿತ್ರ ೧). ೧೧ನೇ ಶತಮಾನದಿಂದ ೧೬ನೇ ಶತಮಾನದ ವರೆಗೆ ಎಲ್ಲೂ ಮುರಿಯದ ಪ್ರಮುಖ ಕಾಂಡವಾಗಿರುವ ಲಕ್ಷಾಧ್ಯಾಯಿ (ಭಿಕ್ಷಾ)ವಂಶದ ಸಂತಾನಗಳೆಂದು ಕರೆಯಲ್ಪಟ್ಟ ಅನೇಕ ಉಪಶಾಖೆಗಳ ಉದಯಕ್ಕೆ ಗೋಳಕಿಪಂಥವು ಕಾರಣವಾಯಿತು. ಅವುಗಳ ಪೈಕಿ ೧೨ನೇ ಶತಮಾನದ ಪ್ರಾರಂಭದಲ್ಲಿ ಚಿಗುರೊಡೆದ ತಿರುಚ್ಚತ್ತಿಮುರ್‍ರಮ್ ಶಾಖೆ ಮುಂದೆ ಒಂದೇ ಸಮನೆ ೨೦೦ ವರ್ಷ ಬೆಳೆಯಿತು. ನಂದಿಕೇಶ್ವರ, ಮಾಳಿಗೈಯಿ ಮಠ, ಶೆಂಬೈಯಿಕ್ಕುಡಿ ಮರುದಪ್ಪೆರುಮಾಳ್, ಪಂಡರಂಗವಾಣರ್ ಶಾಖೆಗಳು ೧೩ನೇ ಶತಮಾನದ ಪ್ರಾರಂಭದಲ್ಲಿ ಹುಟ್ಟಿ ಅದೇ ಶತಮಾನದ ಕೊನೆಗೆ ನಶಿಸಿಹೋದವು, ಇಲ್ಲವೆ, ಬಹುಶಃ ಮುಖ್ಯಕಾಂಡದಲ್ಲಿ ಲೀನವಾದವು. ಕೀಳೈ ಮಠದ ಶಾಖೆಯು ಸುಮಾರು ೧೩ನೇ ಶತಮಾನದ ಮಧ್ಯದಲ್ಲಿ ಹುಟ್ಟಿ ಮುಂದಿನ ಒಂದು ಶತಮಾನ ಪೂರ್ತಿ ಜೀವಿತವಿದ್ದು ಅನಂತರ ಅದು ಹೇಳಹೆಸರಿಲ್ಲದಂತಾಯಿತು.

ಮೆಯ್ಕಂಡನ ಕಾಲ, ಮೂರನೆಯ ರಾಜರಾಜನ ಅವಧಿಯಲ್ಲಿ ಕೆತ್ತಲಾದ ಶಾಸನದ ಆಧಾರದ ಮೇಲೆ ೧೩ನೇ ಶತಮಾನದ ಮಧ್ಯಭಾಗವೆಂದು ತಿಳಿಯಲಾಗಿದ್ದರೂ, ಅವನ ಹೆಸರಿನ ವಂಶದ ಬಗೆಗೆ ಕೇವಲ ೧೬ನೇ ಶತಮಾನದಲ್ಲಷ್ಟೇ ಕೇಳಿಬರುತ್ತದೆ. ಮೆಯ್ಕಂಡನ ಕಾಲ ಮತ್ತು ಅವನ ಹೆಸರಿನ ವಂಶಪರಂಪರೆಯ ಸ್ಥಾಪನೆಯ ನಡುವಿನ ೨೦೦(ಎರಡುನೂರು) ವರ್ಷದ ಎದ್ದುಕಾಣುವ ಅಂತರಕ್ಕೆ ಕಾರಣ ಕೊಡುವುದು ಕಷ್ಟದ ಕೆಲಸ. ತಿರುವಾವಡುತುರೈ ಅಧೀನಮ್‌ನ ಸಾಂಪ್ರದಾಯಿಕ ಕಾಲಾನುಕ್ರಮಣಿಕೆಗಳು (Chronicles) (ಅನನ್, ೧೯೬೨ ಮೀನಾಕ್ಷಿ ಸುಂದರಮ್ ಪಿಳ್ಳೈ ೧೯೫೦) ಸ್ವತಃ ಮೆಯ್ಕಂಡನೇ ಶಿವಜ್ಞಾನ ಬೋಧಮ್‌ವನ್ನು ಬೋಧಿಸಿದನೆಂದು ಹೇಳುತ್ತವೆ. ಈ ಬೋಧನಕ್ರಮ (ಶಿಷ್ಯ ಗುರುವಿನ ಉತ್ತರಾಧಿಕಾರಿಯಾಗುವುದು) ಅರುಣಂದಿ ದೇವನಿಂದ ಪ್ರಾರಂಭವಾಗಿ ಮರೈಜ್ಞಾನಸಂಬಂಧ, ಉಮಾಪತಿ, ಅರುಣಮಶ್ಶಿವಾಯ, ಶಿವಪ್ರಕಾಶರ ಮುಖಾಂತರ ತಿರುವಾವಡುತುರೈ ಆಧೀನಮ್ ವಂಶಪರಂಪರೆಯನ್ನು ಸ್ಥಾಪಿಸಿದ ಹೆಗ್ಗಳಿಕೆ ಪಡೆದ ನಮಶ್ಶಿವಾಯ (ಪಂಚಾಕ್ಷರದೇಶಿಕ)ನ ವರೆಗೆ ನಿಯತವಾಗಿ ಮುಂದುವರಿಯಿತು. ಮೇಲಿನ ವಂಶ ಪರಂಪರೆಯ ಮರೈಜ್ಞಾನ ಸಂಬಂಧನು ೧೯೦೮ರ ವರದಿಯ, ಕ್ರಿ.ಶ. ೧೩೨೫/೬ರ ೫೨೨ ಶಾಸನದಲ್ಲಿ ಉಲ್ಲೇಖಿಸಿದ ವ್ಯಕ್ತಿಯನ್ನು ಹೋಲುತ್ತಿದ್ದರೂ ಈ ಪರಂಪರೆಯ ಇನ್ನುಳಿದ ಆಚಾರ್ಯರ ಹೆಸರುಗಳು ಶಾಸನಗಳಲ್ಲಿ

ಕಂಡುಬರುವುದಿಲ್ಲ. ಅದೇ ರೀತಿ ಶಾಸನಗಳಲ್ಲಿ ಉಲ್ಲೇಖಿಸಲಾದ ಆಚಾರ್ಯರ ಸ್ಥಳಗಳನ್ನು ಆಧೀನಮ್ ವಂಶಪರಂಪರೆಯ ಕಾಲಾನುಕ್ರಮಣಿಗಳಲ್ಲಿ ಗುರುತಿಸಲಿಕ್ಕಾಗದು. ಆದಾಗ್ಯೂ, ಮೆಯ್ಕಂಡ ಮತ್ತು ತಿರುವಾವಡುತುರೈ ವಂಶಪರಂಪರೆಗಳು ಮೆಯ್ಕಂಡನ ನಂತರದ ಕಾಲಾವಧಿಗೆ ಸಂಬಂಧಿಸಿರುತ್ತವೆ. ಮತ್ತು ಅವುಗಳಲ್ಲಿ ಪ್ರತಿಯೊಂದು ಲಕ್ಷಾಧ್ಯಾಯಿ (ಭಿಕ್ಷಾ) ವಂಶವೃಕ್ಷದೊಂದಿಗೆ ಸ್ಪಷ್ಟ ಸಂಬಂಧ ಹೊಂದಿರುತ್ತವೆ. ಮೊದಲನೆಯ (ಮೆಯ್ಕಂಡ) ವಂಶಪರಂಪರೆಯ ಶಿವಪ್ರಕಾಶನು ಭಿಕ್ಷಾಮಠದ ಶಿಷ್ಯನಾಗಿದ್ದನೆಂದು ಹೇಳಲಾಗುತ್ತದೆ (೧೯೩೫/೬, ೧೬೪). ಈ ಆಚಾರ್ಯನು ತಿರುವಾವಡುತುರೈ ಆಧೀನಮ್ ವಂಶದ ಪಂಚಾಕ್ಷರದೇಶಿಕನ ಗುರುವನ್ನು ಹೋಲುವ ಸಾಧ್ಯತೆ ಇರುತ್ತದೆ. ತಿರುವಾವಡುತುರೈ ಪರಂಪರೆಯಲ್ಲಿ ಮುಂದುವರಿದ ಆಚಾರ್ಯರು ಮತ್ತು ಅವರ ಉತ್ತರಾಧಿಕಾರಿಗಳು ಮತ್ತು ಉತ್ತರೋತ್ತರ ಅಭಿವೃದ್ಧಿಯಾದ ಗುರುಪೀಠಗಳು ಗೌರವ ಸೂಚಕ 'ಶ್ರೀ-ಲಾ-ಶ್ರೀ' ಪದವನ್ನು ಇಂದಿಗೂ ಉಪಯೋಗಿಸುತ್ತವೆ. 'ಶ್ರೀ-ಲಾ-ಶ್ರೀ'ಯು 'ಶ್ರೀ ಲಕ್ಷಾಧ್ಯಾಯಿ ಶ್ರೀ'ಯ ಸಂಕ್ಷಿಪ್ತ ರೂಪವಲ್ಲದೆ ಮತ್ತೇನೂ ಆಗಿರದು. (ಕೋಲಾರ ECX, 55,ಕ್ರಿ.ಶ. ೧೨೮೫ ಶಾಸನದಲ್ಲಿ ಬರುವ ಶ್ರೀ ಮಲ್ಲಕ್ಷಾಧ್ಯಾಯಿ... ಯೊಂದಿಗೆ ಹೋಲಿಸಿರಿ).ಇದು ಈ ವಂಶಗಳು ನೇರವಾಗಿ ಗೋಳಕಿವಂಶವೃಕ್ಷದ ಲಕ್ಷಾಧ್ಯಾಯಿ(ಭಿಕ್ಷಾ)ಮಠಕ್ಕೆ ಅಧೀನವಾಗಿರುವುದನ್ನು ಸ್ಪಷ್ಟವಾಗಿ ಸೂಚಿಸುತ್ತದೆ.

## ಗೋಳಕಿಮಠ

**ಗೋಳಕಿಮಠಕ್ಕೆ ಅಧೀನವಾಗಿದ್ದ ಸಂಸ್ಥೆಗಳು ಮತ್ತು ಆಚಾರ್ಯರು:**

ಹಿಂದಿನ ಪುಟಗಳಲ್ಲಿ ಸವಿಸ್ತರವಾಗಿ ವಿವರಿಸಿದ ಮುಖ್ಯ ಗೋಳಕಿ ವಂಶವೃಕ್ಷದ ಅಥವಾ ಅದಕ್ಕೆ ನೇರ ಸಂಬಂಧ ಹೊಂದಿದ ಶಾಖೆಗಳ ಬಗೆಗೆ ಹೇಳುವ ಶಾಸನಗಳಲ್ಲದೆ, ಶಾಸನ ಸಾಹಿತ್ಯದಲ್ಲಿ ಇನ್ನೂ ಸಾಕಷ್ಟು ಮಾಹಿತಿ ಲಭ್ಯವಿರುತ್ತದೆ. ಆದರೆ ಅಧಿಕೃತ ಮಾಹಿತಿಯ ಕೊರತೆಯಿಂದಾಗಿ ಅದನ್ನು ಯಾವುದೇ ನಿರ್ದಿಷ್ಟಪರಂಪರೆಗೆ ಸೇರಿಸಲು ಸಾಧ್ಯವಾಗುತ್ತಿಲ್ಲ. ಏನೆ ಆಗಲಿ, ಈ ದಾಖಲೆಗಳು ಮುಖ್ಯ ಗೋಳಕಿ ವಂಶವೃಕ್ಷ ಇಲ್ಲವೆ ಗೋಳಕಿವಂಶ ಅನುಸರಿಸಿದ ಶೈವಧರ್ಮದ ಪ್ರಕಾರದೊಂದಿಗೆ ಹೊಂದಿದ್ದ ನಿಕಟ ಸಂಬಂಧವನ್ನು ಸೂಚಿಸುತ್ತವೆ. ಈ ಸಮಗ್ರ ಮಾಹಿತಿ, ತಮಿಳುನಾಡಿನಲ್ಲಿ ೧೧ ರಿಂದ ೧೪ನೇ ಶತಮಾನದ ವರೆಗೆ ಗೋಳಕಿಪಂಥದ ಜನಪ್ರಿಯತೆ ಮತ್ತು ಅದರ ವ್ಯಾಪಕ ಪ್ರಸಾರವನ್ನು ಒತ್ತಿ ಹೇಳುವುದರಿಂದ, ಮಹತ್ವದ್ದಾಗಿರುತ್ತದೆ (ನಕಾಶೆ-೨).

**೧೧ನೇ ಶತಮಾನ:** ಈ ಕಾಲಾವಧಿಯ ಶಾಸನಗಳೆಲ್ಲ ಮೊದಲನೆಯ ರಾಜೇಂದ್ರನಿಂದ ಮೊದಲನೆಯ ಕುಲೋತ್ತುಂಗನ ವರೆಗೆ ಚೋಳ ಅರಸರಿಗೆ ಸೇರಿರುತ್ತವೆ. ತಿರುವಾವಡುತುರೈಯಲ್ಲಿ ಸರ್ವದೇವನ್‌ಮಠವೆಂಬ ಸನ್ಯಾಸಿಮಠವನ್ನು ಸ್ಥಾಪಿಸಿ ರಾಜೇಂದ್ರನ ಧರ್ಮಗುರುವಿನ ಹೆಸರನ್ನು ಶಾಶ್ವತಗೊಳಿಸಲಾಯಿತು. ಮತ್ತು ಅದರಲ್ಲಿ ಮಾಹೇಶ್ವರರು ವಾಸಿಸುತ್ತಿದ್ದರು (೧೯೨೫, ೧೧೩, ಕ್ರಿ.ಶ. ೧೦೪೦). ರಾಜಾಧಿರಾಜನ ಎರಡು ಶಾಸನಗಳು

ಮಠಗಳಿಗೆ ಭೂಮಿಯನ್ನು ಮಾರಿದ ಬಗೆಗೆ ಹೇಳುತ್ತವೆ ಮತ್ತು ಅವುಗಳಲ್ಲಿ ಒಂದು ನಿರ್ದಿಷ್ಟವಾಗಿ ಪವಿತ್ರಮಾಣಿಕ್ಕಮ್ ಮಠದ ಬಗೆಗೆ ಹೇಳುತ್ತದೆ (೯೧೫, ೨೫೧, ಕ್ರಿ.ಶ. ೧೦೪೧, ೯೧೫, ೨೪೭, ಕ್ರಿ.ಶ. ೧೨೫೧). ಈ ಶಾಸನಗಳನ್ನು ಉತ್ತರ ಆರ್ಕಾಟ ಜಿಲ್ಲೆಯ ಬ್ರಹ್ಮದೇಶಮ್‌ದಲ್ಲಿಯ ಚಂದ್ರಮೌಳೀಶ್ವರ ಗುಡಿಯ ಗೋಡೆಗಳ ಮೇಲೆ ಕೆತ್ತಲಾಗಿರುತ್ತದೆ, ಮತ್ತು ಅವು ಬಹುಶಃ ಅದೇ ಮಠವನ್ನು ಸೂಚಿಸುತ್ತವೆ. ಅದೇ ಊರಲ್ಲಿ ಮೊದಲನೆಯ ಕುಲೋತ್ತುಂಗನ ಕಾಲದ ರಾಜನಾರಾಯಣಮಠವೆಂಬ ಇನ್ನೊಂದು ಸನ್ಯಾಸಿಮಠ ಇದ್ದಂತೆ ತೋರುತ್ತದೆ (೯೧೮, ೧೭೯, ಕ್ರಿ.ಶ. ೧೦೭೫). ಈ ಅರಸನ ಇನ್ನುಳಿದ ಶಾಸನಗಳು ಕೂಡ ತಿರುವಾವಡುತುರೈಯಲ್ಲಿಯ ತಿರುವೀದಿಮಠವನ್ನು (೯೨೫, ೧೪೭, ಕ್ರಿ.ಶ. ೧೦೮೪) ಮತ್ತು ತಿರುಕ್ಕಡೈಯುರದಲ್ಲಿಯ ಮಾರ್ಕಂಡೇಯನ್‌ಮಠವನ್ನು (ಎರಡೂ ಊರುಗಳು ಮಯೂರಮ್ ತಾಲೂಕಿನಲ್ಲಿ ಬರುತ್ತವೆ) (೯೨೫, ೨೪೩, ಕ್ರಿ.ಶ. ೧೦೯೬) ಹೆಸರಿಸುತ್ತವೆ. ದಿನಾಂಕರಹಿತ ದಾಖಲೆಯೊಂದು, ಬಹುಶಃ ಅದೇ ಶತಮಾನದ್ದು, ದಕ್ಷಿಣ ಆರ್ಕಾಟ ಜಿಲ್ಲೆಯ ತಿರುನಮನಲ್ಲೂರಲ್ಲಿರುವ ದೇವಾಲಯದಲ್ಲಿ ಚಂದೇಶ್ವರ ಮೂರ್ತಿಯನ್ನು ಪ್ರತಿಷ್ಠಾಪಿಸಿದ ವಾಮಶಿವ ಆಚಾರ್ಯನ ಕುರಿತು ಹೇಳುತ್ತದೆ (೯೩೯/೪೦, ೨೪೧).

**೧೨ನೇ ಶತಮಾನ:** ತಿರುವಾವಡುತುರೈಯಲ್ಲಿರುವ ಇನ್ನೂ ಕೆಲವು ಸನ್ಯಾಸಿಮಠಗಳ ಹೆಸರುಗಳು ಕೇಳಬರುತ್ತವೆ:ತಿರುನೀಲವಿಟಂಕನಮಠ (೯೨೫, ೧೪೪, ಕ್ರಿ.ಶ. ೧೧೦೧), ಪರಮಾಣವಾಚಕನಮಠ (೯೨೫, ೧೫೫, ಕ್ರಿ.ಶ. ೧೧೦೯), ಶಿವಲೋಕನಾಯಕನ್‌ಮಠ (೯೨೫, ೧೪೮, ಕ್ರಿ.ಶ. ೧೧೧೬). ಕೊನೆಯದಾಗಿ ಉಲ್ಲೇಖಿಸಿದ ಸನ್ಯಾಸಿಮಠವು ವಿಕ್ರಮಚೋಳದೇವನ ಕಾಲದಲ್ಲಿ ಹೆಚ್ಚಿನ ಪೋಷಣೆ ಪಡೆಯಿತು (೯೨೫, ೧೪೯, ಕ್ರಿ.ಶ. ೧೧೨೧). ತಿರುಚಿ ಜಿಲ್ಲೆಯ ಕುಲಿತ್ತಲೈ ತಾಲೂಕಿನ ರತ್ನಗಿರಿಯಲ್ಲಿ ಶಿವಯೋಗಿಗಳ ಮತ್ತು ತಪಸ್ವಿಗಳ ಭೋಜನಕ್ಕಾಗಿ ಏಳುನೂರರವನ್ ಎಂಬವನ ಹೆಸರಿನ ಮಠವಿತ್ತು (೯೧೪, ೧೭೯, ಕ್ರಿ.ಶ. ೧೧೦೯). ಕುಲೋತ್ತುಂಗ ಚೋಳನ್‌ಮಠವು ಕುಂಭಕೋಣಂ ತಾಲೂಕಿನ ಶಿವಪುರಂದಲ್ಲಿ ಕುಲೋತ್ತುಂಗ ಅರಸನ ಹೆಸರಿನಲ್ಲಿ ಸ್ಥಾಪಿಸಲಾಗಿದ್ದು, ಅದು ಮಾಹೇಶ್ವರರ ಭೋಜನಾಲಯವಾಗಿದ್ದಿತು (೯೨೭, ೨೭೭, ಕ್ರಿ.ಶ. ೧೦೭೫) ಮತ್ತು ಈ ಮಠವು ತರುವಾಯ ಉದ್ದೇಶಿತ ಕಾರ್ಯನಿರ್ವಹಣೆಗಾಗಿ ವಿಕ್ರಮ ಚೋಳನ ಕಾಲದಲ್ಲಿ ಹೆಚ್ಚಿನ ಧನಸಹಾಯ ಪಡೆದು ಊರ್ಜಿತಾವಸ್ಥೆಯಲ್ಲಿ ಮುಂದುವರೆಯಿತು (೯೨೭, ೨೭೨, ಕ್ರಿ.ಶ. ೧೧೨೨). ವಿಕ್ರಮಚೋಳನ ಶಾಸನಗಳಲ್ಲಿ ಹೆಸರಿಸಲಾದ ಉಳಿದ ಸನ್ಯಾಸಿಮಠಗಳು ಇಂತಿವೆ:

೧. ಐಂಗೇರ್ರೈನಣ್‌ಮಠ (೯೩೦/೧, ೬೦, ಕ್ರಿ.ಶ. ೧೧೨೧)- ಕುಂಜನೂರು, ಕುಂಬಕೋಣಂ ತಾಲೂಕು, ತಂಜಾವೂರು ಜಿಲ್ಲೆ.

೨. ಪರಸಮಯಕೋಳರಿಮಠ (೯೧೮, ೫೩೪ ಕ್ರಿ.ಶ. ೧೧೨೧)- ಅಚ್ಚುಪುರಂ, ತಂಜಾವೂರು ಜಿಲ್ಲೆ.

೩. ತಿರುಚಿರ್ರಂಬಲ ಮುಡೈಯಾನ್‌ಮಠ (೯೧೮, ೪೩೮, ಕ್ರಿ.ಶ. ೧೧೨೨)

ತಿರುಕ್ಕರುಕವುರ್, ಸಿಯಾಲಿ ತಾಲೂಕು, ತಂಜಾವೂರು ಜಿಲ್ಲೆ.

೪. ಆಚಾರಶೀಲನ್‌ಮಠ (೧೯೩೨/೩, ೩೩, ಕ್ರಿ.ಶ. ೧೧೨೩) ಪಲುರ್, ಚೆಂಗ್ಲಪೇಟೆ.

ಧಾರ್ಮಿಕ ಆಚಾರ್ಯರಾಗಿದ್ದ "ಸ್ವಾಮಿದೇವರ್"ಗಳಲ್ಲಿ ಮಂಗಲಕ್ಕುಡಿಯ ಶ್ರೀಕಂಠಶಿವನ ಹೆಸರು ಮೊದಲನೆಯ ಕುಲೋತ್ತುಂಗನ (೧೯೦೭ರ ವರದಿಯ ೩೦೧) ಶಾಸನದಲ್ಲಿ ಕಾಣಿಸಿಕೊಳ್ಳುತ್ತದೆ. ರಂಗಾಚಾರ್ಯ ಅವರು (೧೯೧೫) ಈ ಆಚಾರ್ಯನನ್ನು ಬ್ರಹ್ಮಮೀಮಾಂಸಾಭಾಷ್ಯೆಯ ಕರ್ತೃವಿನೊಂದಿಗೆ ಗುರುತಿಸುವ ಒಲವು ತೋರಿಸುತ್ತಾನೆ. ವಿಕ್ರಮಚೋಳನ ಶಾಸನಗಳು ಜ್ಞಾನಶಿವ ಉರುಫ್ ಅಳಗಿಯ-ವಿಟಂಕನ್-ಉಯ್ಯವಂದನ್ ಬಗೆಗೆ ಹೇಳುತ್ತವೆ(೧೯೨೬, ೧೪೪-೬, ಕ್ರಿ.ಶ. ೧೧೧೨). ಇನ್ನೊಬ್ಬ ಜ್ಞಾನಶಿವ ಉರುಫ್ ಉಮಾಪತಿದೇವನ ಹೆಸರು ರಾಜಾಧಿರಾಜ (ಎರಡನೆಯ)ನ ದಾಖಲೆಯಲ್ಲಿ ಕಾಣಿಸಿಕೊಳ್ಳುತ್ತದೆ, ಮತ್ತು ಅವನು ಗೌಡದೇಶದ ದಕ್ಷಿಣ-ರಾಢದಲ್ಲಿ ಹುಟ್ಟಿದವನೆಂದು ಹೇಳಲಾಗುತ್ತದೆ (೧೮೯೯, ೨೦, ಕ್ರಿ.ಶ. ೧೧೬೮). ಮೂರನೆಯ ಕುಲೋತ್ತುಂಗನ ಆಳಿಕೆಯಲ್ಲಿ ಶ್ರೀಕಂಠಶಂಭು ಎಂಬವನೊಬ್ಬ, ಅವನೂ ದಕ್ಷಿಣ-ರಾಢ ದೇಶದಿಂದ ಬಂದವನೇ, ಸೋಮೇಶ್ವರ ದೇವರನ್ನು ಸ್ಥಾಪಿಸಿದನೆಂದು ಹೇಳಲಾಗಿದೆ (೧೯೨೫, ೪೦೨, ಕ್ರಿ.ಶ. ೧೧೮೨). ಬಹುಶಃ ಅದೇ ಶ್ರೀಕಂಠಶಂಭುವಿನ ಶಿಷ್ಯನೂ, ಮೂರನೇ ಕುಲೋತ್ತುಂಗನ ಗುರುವೂ ಆದ ಸೋಮೇಶ್ವರನು ಕುಂಭಕೋಣಂ ತಾಲೂಕಿನ ತ್ರಿಭುವನಂದಲ್ಲಿ ಶಿವ-ಪಾರ್ವತಿಯರ ವಿಗ್ರಹಗಳನ್ನು ಸ್ಥಾಪಿಸಿದನು (೧೯೦೭, ೧೯೦). ಪುಕಳಿದೇವರ್ ಉರುಫ್ ನಾನಂದೂರ್-ಉಡೈಯಾರ್ ಎಂಬವನು ಅದೇ ಅರಸನ ಕಾಲದಲ್ಲಿ ತಂಜಾವೂರು ಜಿಲ್ಲೆಯ ತಿರುವೈಗವುರ್ ಗ್ರಾಮದಲ್ಲಿಯ ತಿರುಮುಡೈಯಾಲಂದನ್ ಗುಕೈ (ಸನ್ಯಾಸಿಮಠ)ದ ಅಧಿಪತಿಯಾಗಿದ್ದನು (೧೯೧೪, ೫೪).

**೧೩ನೇ ಶತಮಾನ:** ಈ ಶತಮಾನದ ಗೋಳಕಿಮಠದ ಅಧೀನ ಸಂಸ್ಥೆಗಳು ಚೋಳ ಮತ್ತು ಪಾಂಡ್ಯರ ಪ್ರದೇಶಗಳ ತುಂಬ ವ್ಯಾಪಕವಾಗಿ ಅಭಿವೃದ್ಧಿಹೊಂದಿದವು. ಮೂರನೆಯ ರಾಜರಾಜನ ಆಳಿಕೆಯ ಕಾಲದಲ್ಲಿ ಉತ್ತರ ರಾಷ್ಟ್ರದಲ್ಲಿರುವ ಉತ್ತರಾಗ್ರಹಾರಕ್ಕೆ ಸೇರಿದ "ಸ್ವಾಮಿದೇವರ್" ಎಂದೂ ಕರೆಯಲಾದ ಸೋಮನಾಥದೇವನೆಂಬ ಆಚಾರ್ಯ ಚಿದಂಬರಂದಲ್ಲಿಯ ಒಂದು ಹೂದೋಟದ ವ್ಯವಸ್ಥೆಗೆ ನಾಲ್ವರು ಮಾಲಿಗಳನ್ನಿಟ್ಟುಕೊಳ್ಳಲು ಅನುದಾನ ಪಡೆದನು (೧೯೩೫/೬, ೯, ಕ್ರಿ.ಶ. ೧೨೧೯).ಆಂಡಾರ್ ವೀದಿವಿಟಂಕಪ್ಪೆರುಮಾಳ್‌ನು ತಂಜಾವೂರು ಜಿಲ್ಲೆಯ ತಿರುವಲಿಂಗಾಡು ಗ್ರಾಮದಲ್ಲಿಯ ವನ್ನಾರ-ಮಾದೇವ-ಆಂಡಾರ್‌ಮಠದ ಸ್ವಾಮಿಗಳಲ್ಲಿ ಒಬ್ಬನಾಗಿದ್ದನು (೧೯೨೬, ೯೬, ಕ್ರಿ.ಶ. ೧೨೨೭). ಸಿರುತೊಂಡರ್‌ಮಠಕ್ಕೆ ನಿಯೋಜಿಸಲ್ಪಟ್ಟ ನಮಶ್ಶಿವಾಯನ ಬಗೆಗೂ ತಿಳಿದುಬರುತ್ತಿದ್ದು, ಅವನು ಆಂಡಾರ್ ಮರುಡಪ್ಪೆರುಮಾಳ್ ವಂಶಪರಂಪರೆಗೆ ಸೇರಿದವನೆಂದು ಕೂಡ ಹೇಳಲಾಗುತ್ತದೆ. ಈ ದಾಖಲೆಯು ತಂಜಾವೂರು ಜಿಲ್ಲೆಯ ನನ್ನಿಲಮ್ ತಾಲೂಕಿನ ನಿಯತ್ತುನಂಗ್ಯೆಯಲ್ಲಿ ದೊರೆತಿದೆ (೧೯೨೨, ೭೬, ಕ್ರಿ.ಶ. ೧೨೩೨). ತಿರುವಾವಡುತುರೈಯಲ್ಲಿಯ ಗೊಮುಕೇಶ್ವರ ದೇವಾಲಯ ಒಂದು ಮಠದೊಂದಿಗೆ ನಿಕಟ ಸಂಬಂಧ ಹೊಂದಿದಂತೆ ತೋರುತ್ತಿದ್ದು, ಕುರುಂಕುಡೈಯನ್-

ತಿರುವೇಕಂಬಮುಡ್ಯೆಯಾನ್ ಉರುಫ್ ತಿರುವಾವಡುತುರ್ಯೆ-ಉದ್ಯೆಯಾನನು ಈ ಮಠದ ಮುಖ್ಯಸ್ಥನಾಗಿದ್ದನು (೧೯೨೫, ೧೫೬ ಕ್ರಿ.ಶ. ೧೨೩೭).

ಉತ್ತರ ಆರ್ಕಾಟ ಜಿಲ್ಹೆಯ ವಲಜಪೇಟದಲ್ಲಿ ದೊರೆತ ವೀರಗಂಡಗೋಪಾಲನ ಶಾಸನವು ಮುದಲಿಯಾರ್-ನಂದಿಕೇಶ್ವರ-ಶಿವನು ಅರುಂತವಂಶೇದಾರ್ ಮಠದ ಜೀರ್ಣೋದ್ಧಾರಕ್ಕಾಗಿ ಭೂದತ್ತಿಪಡೆದುದನ್ನು ಉಲ್ಲೇಖಿಸುತ್ತದೆ (೧೯೪೫/೬, ೬೦). ವಿಜಯ-ಗಂದ-ಗೋಪಾಲನ ಕಾಲದಲ್ಲಿ ಚಂಗ್ಲಪೇಟೆ ಜಿಲ್ಹೆಯ ತಿರುಕ್ಕಚಿಯೂರಲ್ಲಿ ತ್ಯಾಗವಿನೋದನ್‌ಮಠವು ಕಾರ್ಯನಿರ್ವಹಿಸುತ್ತಿದ್ದು ಮುದಲಿಯಾರನೊಬ್ಬನು ಅವರೊಂದಿಗೆ ಸಂಬಂಧಹೊಂದಿದ್ದನು (೧೯೩೨/೩, ೫೮).

ಜಟಾವರ್ಮನ್ ಸುಂದರಪಾಂಡ್ಯನ ಕಾಲಾವಧಿಯಲ್ಲಿ ಕುಂಭಕೋಣಮ್ ತಾಲೂಕಿನ ಉದ್ಯೆಲೂರ್‌ಲ್ಲಿ ಅಂಬಿಮುಕ್ತನಮಠ ಹೆಸರಿನ ಸನ್ಯಾಸಿಮಠವಿದ್ದಿತು. ಅದನ್ನು ಶಿವಪದಶೇಖರ ಮಂಗಲಂದಿಂದ ತಪಸ್ವಿಯಾಗಿದ್ದ ವಿದ್ಯಾಶಿವಪಂಡಿತ ಉರುಫ್ ತಿರುಚ್ಚಿರ್ತಂಬಲಂ-ಉಡ್ಯೆಯಾರ್-ತಿರುತ್ತೈಗುರ್-ನಾಯನಾರ್‌ನು ಸ್ಥಾಪಿಸಿದನು (೧೯೨೭, ೩೧೧). ವಿಕ್ರಮ ಚೋಳನ ಕಾಲದಲ್ಲಿ ಎರಡನೆಯ ಶಿವಪದಶೇಖರ ಮಂಗಲಂ ಊರು ಶ್ರೀ ಮಹೇಶ್ವರಸ್ಥಾನಂ ಎಂದು ಮಹತ್ವಪಡೆದದ್ದು ಗಮನಾರ್ಹ ಸಂಗತಿ (೧೯೨೭, ೩೦೩). ಅದೇ ಸುಂದರ ಪಾಂಡ್ಯನ ಮತ್ತೊಂದು ದಾಖಲೆಯು ಕವಿರಾಜ ಪದವಿ ಪಡೆದ ಈಶ್ವರಶಿವನ ಬಗೆಗೆ ಹೇಳುತ್ತದೆ (೧೯೨೪, ೪೭). ರಾಮನಾಥಪುರಂ ಜಿಲ್ಹೆಯ ತಿರುಪುತ್ತೂರಲ್ಲಿಯ ತಿರುಜ್ಞಾನಸಂಬಂಧಂ ಮಠಕ್ಕೆ ಧಾರ್ಮಿಕ ಆಚಾರ್ಯನಾದ ಶ್ರೀಕಂಠಶಿವನು ಮುಖ್ಯಸ್ಥನಾಗಿದ್ದನು (೧೯೦೮, ೧೨೯). ಭವಿತಾಚಾರ್ಯ ಉರುಫ್ ದಕ್ಷಿಣಾಮೂರ್ತಿಶಿವ ಎಂಬವನು ಮಿಲಲ್ಯೆಯುರ ಪಟ್ಟಿನಂದಲ್ಲಿಯ ಮಠದಲ್ಲಿ ವಾಸಿಸುತ್ತಿದ್ದನು (೧೯೪೬/೭, ೫೨) .

ಗಂಗೋಳಿ-ಜ್ಞಾನ-ಶಿವ ಉರುಫ್ "ಸ್ವಾಮಿದೇವ"ನು ವಿಶ್ವೇಶ್ವರದೇವರಿಗೆ ಗುಡಿಯನ್ನು ಕಟ್ಟಿಸಿದನು ಮತ್ತು ಪಲ್ಲವ ವಂಶದ ಕೊಪ್ಪೆರುಂಜಿಂಗನು ಅದಕ್ಕೆ ಅನುದಾನ ನೀಡಿದನು (೧೯೪೯/೪೦, ೨೪೨, ಕ್ರಿ.ಶ. ೧೨೩೫). ಅದೇ ಅರಸನ ಇನ್ನೊಂದು ದಾಖಲೆಯು ದಕ್ಷಿಣ-ರಾಥಾ ದೇಶದ ಗಂಗೋಳಿ-ಈಶ್ವರ-ಶಿವ ಉರುಫ್ ತಿರುಚ್ಚಿರಂಬಲಂ-ಉದ್ಯೆಯಾರ ಎಂಬ ಮತ್ತೊಬ್ಬ ಆಚಾರ್ಯನ ಬಗೆಗೆ ಹೇಳುತ್ತದೆ(೧೯೩೪/೫, ೧೦೫, ಕ್ರಿ.ಶ. C ೧೨೫೨).

ಈ ಧಾರ್ಮಿಕ ಆಚಾರ್ಯರು ಮತ್ತು ಸಂಸ್ಥೆಗಳಲ್ಲದೆ ಗೋಳಕಿಪಂಥದ ಜಾಲಬಂಧ (net-work)ಕ್ಕೆ ಸರಿಹೋಗುವ ಇನ್ನೂ ಅನೇಕ ಮಠಗಳಿದ್ದವು. ಈ ಸಂಸ್ಥೆಗಳು ಮುಖ್ಯವಾಗಿ ಜನೋಪಕಾರಿ ಸ್ವರೂಪದವಾಗಿದ್ದು, ಅವು ಚೋಳ ಮತ್ತು ಪಾಂಡ್ಯ ದೇಶಗಳಲ್ಲಿ ಹರಡಿದ್ದವು. ಚೋಳದೇಶದಲ್ಲಿ ಮಠಗಳು:

೧. ವಲ್ಲ್ಮವರನ್ ಮಠ, ಪಲುರ್, ಚಿಂಗ್ಲಪುತ್, ೧೯೩೨/೩, ೨೬, ಕ್ರಿ.ಶ. ೧೨೦೯.

೨. ತಿಲ್ಲೈವಾಳಂದಣನ್ ಮಠ, ತಿರುವೆಂಕಡು, ಉತ್ತರ ಆರ್ಕಾಟ, ೧೯೨೨, ೪೦೪, ಕ್ರಿ.ಶ. ೧೨೧೧.

೩. ಅಂಬರಕ್ಕುಡೈಯನ್ ಮಠ, ತಿರುಪ್ಪಲೈವನಂ, ಚಿಂಗ್ಲಪುತ್, ೧೯೨೮/೯, ೩೫೦ ಕ್ರಿ.ಶ. ೧೨೨೩.
೪. ವಣ್ಣಾರ-ಮಾದೇವ-ಆಂಡನ್‌ಮಠ, ತಿರುವಲಂಗಡು, ತಂಜಾವೂರು, ೧೯೨೬, ೯೩, ಕ್ರಿ.ಶ. ೧೨೨೭.
೫. ಗಂಡ-ಗೋಪಾಲ-ಮಾಣಿಕ್ಕಮಠ, ತಿರುಪ್ಪಲೈವನಂ, ಚಿಂಗ್ಲಪುತ್, ೧೯೨೮/೯, ೩೩೦ ಕ್ರಿ.ಶ. ೧೨೩೪.
೬. ವಡಕ್ಕೀಳ್ ಮಠ, ತಿರುಮಕ್ಕೊಟ್ಟೈ, ತಂಜಾವೂರು, ೧೯೧೭, ೨೬೨, ಕ್ರಿ.ಶ. ೧೨೪೭.
೭. ಮನುವಿಳಂಗಪ್ಪೆರುಮಾಳ್ ಮಠ, ಕೊಯಿಲ್-ದೇವರಾಯಂಪೆತ್ತೈ, ತಂಜಾವೂರು, ೧೯೨೩, ೨೭೮, ಕ್ರಿ.ಶ. ೧೨೫೧.

ಪಾಂಡ್ಯ ದೇಶದಲ್ಲಿಯ ಮಠಗಳು

೧. ವೀರಪ್ಪಂಡಿತನ್ ಮಠ, ತಿರುವಲೀಶ್ವರಂ, ತಿರುನೆಲ್ವೆಲಿ, ೧೯೧೬, ೩೫೭.
೨. ಮುದಲಿಯಾರ್ ಮಠ, ತಿರುಕಲಕ್ಕುಡಿ, ರಾಮನಾಥಪುರಂ, ೧೯೧೬, ೩೫.
೩. ಶೇರುಮನ್ ಪೆರುಮಾಳ್‌ಮಠ, ಇರನಿಯುರ್, ರಾಮನಾಥಪುರಂ, ೧೯೨೬, ೮.
೪. ನರಲೋಕ ಸೂರಿಯನ್ ಮಠ, ಮದುರೈ, ೧೯೧೫, ೪.

**೧೪ನೇ ಶತಮಾನ ಮತ್ತು ನಂತರ:** ೧೪ನೇ ಶತಮಾನ ಮತ್ತು ನಂತರ ಶತಮಾನಗಳಲ್ಲಿ ಶೈವಧರ್ಮದ ಗೋಳಕಿ ಪಂಥ ಇಲ್ಲವೆ ಅದರ ಆಧೀನ ಸಂಸ್ಥೆಗಳ ಹಾಗೂ ಆಚಾರ್ಯರ ಬಗೆಗೆ ಉಲ್ಲೇಖಗಳು ಒಮ್ಮೆಗೇ ವಿರಳವಾಗುತ್ತವೆ. ವಿಜಯನಗರ ಅರಸುಮನೆತನ ಹೊಸದಾಗಿ ಗೆದ್ದುಕೊಂಡ ತಮಿಳುನಾಡಿನ ಪ್ರದೇಶದಲ್ಲಿ ಸಣ್ಣಸಂಖ್ಯೆಯಲ್ಲಿ ಬದುಕಿ ಉಳಿದ ಈ ಕೆಲವು ಮಠಗಳು ವಿಜಯನಗರ ಅರಸರ ಪೋಷಣೆ ಪಡೆದು ಮುಂದುವರೆದವು. ತಮಿಳುನಾಡಿನ ದಕ್ಷಿಣ ತುದಿಗಿದ್ದ ಕೆಲವು ಮಠಗಳು ಪಾಂಡ್ಯವಂಶದ ಕೊನೆಯ ಅರಸರ ಸಹಾಯ ಪಡೆದವು.

ತಿರುವಣ್ಣಾಮಲೈಯಲ್ಲಿಯ ಪೆರಿಯಮಠದ ಆಚಾರ್ಯನ ಬಗೆಗೆ ಹೇಳುವ ಕಂಪನ ಒಡೈಯರ್‌ನ ಶಾಸನ (೧೯೧೯, ೩೦೫, ಕ್ರಿ.ಶ. ೧೩೪೯)ವು ವಿಜಯನಗರ ಅರಸುಮನೆತನದ ಅತ್ಯಂತ ಪ್ರಾಚೀನ ದಾಖಲೆಯಾಗಿರುವಂತೆ ತೋರುತ್ತದೆ. ಎರಡನೆಯ ಬುಕ್ಕನ ಮತ್ತೊಂದು ಶಾಸನವು ಚೆಂಗ್ಲಪೇಟೆ ಜಿಲ್ಲೆಯ ರಾಮಗಿರಿಯಲ್ಲಿದ್ದ ಸನ್ಯಾಸಿಮಠದ ಮುಖ್ಯಸ್ಥ ಸತ್ಯದರ್ಶಿನಿಗೆ ಕೊಟ್ಟ ಭೂದತ್ತಿಯನ್ನು ದಾಖಲಿಸುತ್ತದೆ (೧೯೦೪, ೬೪೨, ಕ್ರಿ.ಶ. ೧೩೮೨). ಸಲ್ವೆವ ಅರಸರ ಆಳಿಕೆಯಲ್ಲಿ ಅಘೋರ-ನಾಯನಾರ್ ಎಂಬ ಆಚಾರ್ಯನು ತಿರುವನ್ನೈನಲ್ಲೂರಲ್ಲಿಯ ಸನ್ಯಾಸಿ ಮಠದಲ್ಲಿ ವಾಸಿಸುತ್ತಿದ್ದನು (೧೯೨೧, ೪೧೧, ಕ್ರಿ.ಶ. ೧೪೭೮) ಮತ್ತು ನಮಶ್ಶಿವಾಯ ಎಂಬ ಮತ್ತೊಬ್ಬ ಆಚಾರ್ಯನು ತೆರ್ಕಿಲ್ ಮಠಕ್ಕೆ ಜೋಡಿಸಲ್ಪಟ್ಟಿದ್ದನು (೧೯೪೨/೩, ೯೫). ಸದಾಶಿವನ ಆಳಿಕೆಯಲ್ಲಿ ಕುಡ್ಡಲೊರೆ ತಾಲೂಕಿನ ತಿರುವಡಿಯಲ್ಲಿ ಕಂದಸ್ವಾಮಿಮಠ ಊರ್ಜಿತಾವಸ್ಥೆಯಲ್ಲಿದ್ದಿತು (೧೯೨೧, ೪೧೧, ಕ್ರಿ.ಶ. ೧೫೬೨).

ಆಮರ್ದಾಶ್ರಮ ವಂಶಪರಂಪರೆಗೆ ಸೇರಿದ ಮಹಾಗಣಪತಿ ನಾಯನಾರ್ ಉರುಫ್

ವಾಮದೇವ ನಾಯನಾರ್ ಎಂಬ ಆಚಾರ್ಯನು ೧೫/೧೬ನೇ ಶತಮಾನದ ಪಾಂಡ್ಯ ಅರಸರಿಂದ ಭೂದತ್ತಿ ಪಡೆದನು (೧೯೧೭, ೪೬೫, ೫೧೬). ಊರುಡೈ-ಮುದಲಿ ವಂಶದ ಸೆಂಬಕವನ್-ಪೆರುಮಾಳ್‌ನ ಉಲ್ಲೇಖ ೧೯೧೭ರ ವರದಿಯ ಶಾಸನ ೫೮೨ರಲ್ಲಿ ದೊರೆಯುತ್ತದೆ. ಉಮೈಯೊರುಭಾಗ ಎಂಬ ಮತ್ತೊರ್ವ ಆಚಾರ್ಯನು ತಿರುನೆಲ್ವೆಲಿ ಜಿಲ್ಲೆಯ ಕುಟ್ರಾಲಂ ಊರಲ್ಲಿದ್ದ ಸನ್ಯಾಸಿಮಠದ ಉಸ್ತುವಾರಿಮಾಡುತ್ತಿದ್ದನು.

**ತಿರುಜ್ಞಾನ ಸಂಬಂಧನ್ ಮಠ ಮತ್ತು ಆಳುಡೈಪಿಳ್ಳೈ:**

ಈ ಸನ್ಯಾಸಿಮಠವನ್ನು ಉಲ್ಲೇಖಿಸುವ ಅತ್ಯಂತ ಪ್ರಾಚೀನ ಶಾಸನ ದಾಖಲೆಗಳು ಕ್ರಿ.ಶ. ೧೩ನೇ ಶತಮಾನಕ್ಕೆ ಸೇರಿರುತ್ತವೆ. ಕೆಳಗಿನ ದಾಖಲೆಗಳಿಂದ ಈ ಹೆಸರಿನ ಮಠಗಳು ತಮಿಳುನಾಡಿನ ಬಹಳಷ್ಟು ಪ್ರದೇಶದ ತುಂಬ ಹರಡಿದ್ದುದು ತಿಳಿದು ಬರುತ್ತದೆ.

೧೯೦೮ರ ವರದಿಯ ಶಾಸನ ೫೮೫, ಮೂರನೆಯ ರಾಜರಾಜ, ತಿರುಚ್ಚಿ.
೧೯೩೨/೩ ವರದಿಯ ಶಾಸನ ೧೯೯ ಮೂರನೆಯ ರಾಜರಾಜ,ತಂಜಾವೂರು.
೧೯೦೮ ವರದಿಯ ಶಾಸನ ೩೭೨ ಮೂರನೆಯ ರಾಜರಾಜ,ತಂಜಾವೂರು.
೧೯೧೦ ವರದಿಯ ಶಾಸನ ೧೨೬ ಮೊದಲನೆಯ ಕುಲಶೇಖರ, ಮದುರೈ.
೧೮೯೪ ವರದಿಯ ಶಾಸನ ೧೩ ಮೊದಲನೆಯ ಕುಲಶೇಖರ, ಮದುರೈ.
೧೯೨೭/೮ ವರದಿಯ ಶಾಸನ ೩೧೧ ಮೂರನೆಯ ಕುಲೋತ್ತುಂಗ, ರಾಮನಾಥಪುರಂ.
೧೯೦೮ ವರದಿಯ ಶಾಸನ ೧೨೯ ಮೊದಲನೆಯ ಸುಂದರ ಪಾಂಡ್ಯ, ರಾಮನಾಥಪುರಂ.
೧೯೨೪ ವರದಿಯ ಶಾಸನ ೯೮ ವೀರಪಾಂಡ್ಯ ರಾಮನಾಥಪುರಂ.
೧೯೧೬ ವರದಿಯ ಶಾಸನ ೩೫೯ ವೀರಪಾಂಡ್ಯ ತಿರುನೆಲ್ವೆಲಿ.
೧೮೯೪ ವರದಿಯ ಶಾಸನ ೧೩೨ ಸುಂದರಪಾಂಡ್ಯ ತಿರುನೆಲ್ವೆಲಿ.
೧೮೯೪ ವರದಿಯ ಶಾಸನ ೧೩೧ ಸುಂದರಪಾಂಡ್ಯ ತಿರುನೆಲ್ವೆಲಿ.

ಮಠಾಧಿಪತಿಗಳ ಇಲ್ಲವೆ ಮಠಗಳಲ್ಲಿ ವಾಸಿಸುವ ಆಚಾರ್ಯರ ಮುಖಾಂತರ ಉಳಿದ ಮಠಗಳು ಧರ್ಮಪ್ರಚಾರದಲ್ಲಿ ತೊಡಗಿರುವಾಗ ತಿರುಪ್ಪಲತ್ತುರೈಯಲ್ಲಿನ ಮಠವು (೧೯೦೮, ೫೮೫) ಮಾಹೇಶ್ವರರನ್ನು ಉಣಿಸುವ ಉದ್ದೇಶ ಹೊಂದಿದ್ದಿತು. ಇವುಗಳಲ್ಲಿ ಬಹಳಷ್ಟು ಶಾಸನಗಳು ಈಶಾನದೇವ (೧೯೨೭/೮, ೩೧೧), ಶ್ರೀಕಂಠಶಿವ (೧೯೦೮, ೧೨೯), ಗಣಶಿವ (೧೯೦೮, ೩೯೨), ತತ್ಪುರುಷಶಿವ (S 11, V No. 301), ವಾಗೀಶಪ್ಪೆರುಮಾಳ್ (೧೯೩೨/೩, ೧೯೯), ಪುಕಳೀಪ್ಪೆರುಮಾಳ್ (೧೯೧೬, ೩೫೯), ಪರಮಾತ್ಮದೇವ (೧೯೨೪, ೯೮) ಮುಂತಾದ ಹೆಸರಿನ ಮಠಾಧಿಪತಿಗಳನ್ನು ಉಲ್ಲೇಖಿಸುತ್ತವೆ. ಇವರಲ್ಲಿ ತತ್ಪುರುಷಶಿವನು ತಿರುವರೂರಲ್ಲಿಯ ದಕ್ಷಿಣಗೋಳಕಿಮಠದ ಅಧಿಪತಿ ಆಗಿದ್ದನು. ಪುಕಳಿಪ್ಪೆರುಮಾಳ್‌ನು ಜ್ಞಾನಾಮೃತಾಚಾರ್ಯಮಠ ಪರಂಪರೆಗೆ ಸೇರಿದ್ದನು, ಜ್ಞಾನಶಿವನು ತಿರುಚ್ಚತ್ತಿಮುರಂ ವಂಶಜನಾಗಿದ್ದನು, ಮತ್ತು ಮದುರೈ ಜಿಲ್ಲೆಯ ತೆಂಕರೈಯಲ್ಲಿದ್ದ ಸನ್ಯಾಸಿಮಠವು ಪಂಡರಂಗವಾಣರ್ ಸಂಪ್ರದಾಯಕ್ಕೆ ಸೇರಿದ್ದಿತು. ಈ ವಂಶಗಳು ಗೋಳಕಿವಂಶ ಪರಂಪರೆಯ ನೇರ ಶಾಖೆಗಳಾಗಿದ್ದವೆಂಬುದನ್ನು ಈಗಾಗಲೇ

ಹಿಂದಿನ ಪುಟದಲ್ಲಿ ನೋಡಿದ್ದೇವೆ. ಇನ್ನೂ ಹೆಚ್ಚೆಂದರೆ, ಇವುಗಳಲ್ಲಿಯ ಕೆಲವು ಸಂಪ್ರದಾಯಗಳು ಮತ್ತು ಸನ್ಯಾಸಿಮಠಗಳು ಗೋಲಕಿಪಂಥದೊಂದಿಗೆ ಆಂತರಿಕ ಸಂಬಂಧ ಹೊಂದಿದ್ದವೆಂಬುದನ್ನು ೧೯೪೪ರ ವರದಿಯ ಶಾಸನಗಳು (೧೩೧ ಮತ್ತು ೧೩೨) ಸಾಕಷ್ಟು ಖಚಿತಪಡಿಸುತ್ತವೆ.

ಸಮಯಾಚಾರಿಗಳೆಂದು ಕರೆಯಿಸಿಕೊಳ್ಳುವವರಲ್ಲಿ ಮೊದಲಿಗನೆಂದು ತಿಳಿಯಲಾದ ಆಳುಡೈಯಪ್ಪಿಳ್ಳೈ ೧೧ನೇ ಶತಮಾನದ ಪೂರ್ವಾರ್ಧದಿಂದ "ತಿರುಜ್ಞಾನಸಂಬಂಧ" ಎಂಬ ಹೊಸ ಅಭಿಧಾನ ಪಡೆದುದನ್ನು ಬೇರೊಂದೆಡೆಯಲ್ಲಿ ತೋರಿಸಲಾಗಿದೆ (ಸ್ವಾಮಿ ೧೯೭೧). ಈ ಹೊಸ ಅಭಿಧಾನ ಮುಂದಿನ ಶತಮಾನಗಳಲ್ಲಿ ಬಹಳಷ್ಟು ಚಲಾವಣೆ ಪಡೆಯಿತು. ಅದರ ಪರಿಣಾಮವಾಗಿ, ಸನ್ಯಾಸಿಮಠ, ದೇವಾಲಯದ ತೋಟ (ನಂದವನಂ), ದೇವಾಲಯದ ನಿರ್ದಿಷ್ಟ ಕೋಣೆ ಇಲ್ಲವೆ ಕಟ್ಟಡದ ಪ್ರವೇಶ ಮಾರ್ಗ ಮತ್ತು ವ್ಯಕ್ತಿಗಳಿಗೆ "ತಿರುಜ್ಞಾನಸಂಬಂಧ" ಹೆಸರನ್ನು ಇಡಲಾಯಿತು (ಅವ್ವೈದೊರೆಸ್ವಾಮಿ ಪಿಳ್ಳೈ ೧೯೫೮, ಸಿಂಗರವೇಲನ್, ೧೯೬೯). ಮಹತ್ವದ ಅಂಶವೆಂದರೆ, ಸ್ವತಃ ಗೋಲಕಿವಂಶಗಳ ಧಾರ್ಮಿಕ ಆಚಾರ್ಯರೇ ಈ ಹೆಸರನ್ನು ಇಟ್ಟುಕೊಂಡರು (ಉದಾ:೧೯೪೪, ೧೩೧, ೧೩೨).ಇದರಿಂದ ತಮಿಳುನಾಡಿನಲ್ಲಿ ತಮ್ಮ ಪಂಥವನ್ನು ಭದ್ರಪಡಿಸುವ ಅವಧಿಯಲ್ಲಿ ಗೋಲಕಿವಂಶಗಳು ಸಮಯಾಚಾರ್ಯ ಪಂಥವನ್ನು ತಮ್ಮೊಳಗೆ ಅಡಗಿಸಿಕೊಂಡವೆಂಬುದು ಖಚಿತವಾಗುತ್ತದೆ. ಆಳುಡೈಯ ಪಿಳ್ಳೈಗೆ ಹೊಸ ಉಪಾಧಿಯನ್ನು ಕೊಟ್ಟುದು ಗೋಲಕಿ ಶಿಷ್ಯರ ಕೃತ್ಯವಾಗಿರುತ್ತದೆ.

**ತಿರುಚಿ ಜಿಲ್ಹೆಯ ಜಂಬುಕೇಶ್ವರಂದಲ್ಲಿದ್ದ ಶೈವ ಸನ್ಯಾಸಿಮಠಗಳು:**

೧೩/೧೪ನೇ ಶತಮಾನದಲ್ಲಿ ತಿರುಚಿ ಜಿಲ್ಹೆಯ ಜಂಬುಕೇಶ್ವರಂ (ತಿರುವನೈಕ್ಕ) ಶೈವ ಚಟುವಟಿಕೆಯ ಕೇಂದ್ರವಾಗಿದ್ದಿತು. ಸಮಕಾಲೀನ ಶಾಸನಗಳು ಅಲ್ಲಿ ಸ್ಥಾಪಿಸಲಾದ ಸನ್ಯಾಸಿಮಠಗಳು ಮತ್ತು ಅವುಗಳ ಅಧಿಪತಿಗಳ ಬಗೆಗೆ ಕೆಳಗಿನಂತೆ ಹೇಳುತ್ತವೆ:

೧. ತಿರುಜ್ಞಾನ ಸಂಬಂಧನ್ ಮಠ ೧೯೦೮, ೫೮೫, ಕ್ರಿ.ಶ. ೧೨೩೭.

೨. ಅಖಿಲಾಂಡೇಶ್ವರ ಮಠ (ವಿಶ್ವೇಶ್ವರ ಶಿವಾಚಾರ್ಯ) ಪಡುಕ್ಕೊತ್ತೈರಾಜ್ಯದ ಶಾಸನ ೧೯೬, ಕ್ರಿ.ಶ. ೧೩೪೦.

೩. ಸಿಂಗಮದೇವರ್ ಮಠ ೧೯೩೭/೮, ಕ್ರಿ.ಶ. ೧೨೪೧.

೪. ಆಂಡಾರೆಂಪಿರಾನಾರ್ ಮಠ೧೯೦೮, ೫೮೪, ಕ್ರಿ.ಶ. ೧೨೫೧.

೫. ನಾರಪತ್ತೆನ್ನಾಯಿರವನ್‌ಮಠ ೧೯೦೮, ೪೮೬, ೪೮೭.

೬. ನಡುವಿಲ್‌ಮಠ (ವ್ಯಾಪಕಶಿವ) ೧೯೧೪, ೩೫೨.

ಇದಲ್ಲದೆ, ನಾವು ಸದಾಶಿವರಾಜಪೆಯಯಾಜಿಯ ಮಗ ಶ್ರೀಕಂಠದೀಕ್ಷಿತನ ಮಗನಾದ ಚಂದ್ರಶೇಖರ ದೀಕ್ಷಿತನು ಅಧಿಪತಿಯಾಗಿದ್ದ ೧೮ನೇ ಶತಮಾನದ ಏಕವೀರಾಂಬಾಮಠದ ಬಗೆಗೂ ಕೇಳುತ್ತೇವೆ (೧೯೩೭/೮, c.p. ೨೩, ಕ್ರಿ.ಶ. ೧೭೫೪).

ಮೇಲಿನ ಸನ್ಯಾಸಿಮಠಗಳೆಲ್ಲವೂ ಶೈವಸಂಸ್ಥೆಗಳಾಗಿದ್ದರೂ ಅವು ವಿವಿಧ ಪಂಥಗಳಿಗೆ

ಸೇರಿದ್ದರಿಂದ ವಿವಿಧ ಗುಂಪನ್ನು ಪ್ರತಿನಿಧಿಸುತ್ತವೆ. ಹಿಂದಿನಪುಟದಲ್ಲಿ ೧,೪,೫ ಮತ್ತು ೬ನೆಯ ಕ್ರಮಾಂಕದ ಮಠಗಳು ಗೋಳಕಿ ಲಕ್ಷಾಧ್ಯಾಯಿ ಪಂಥಕ್ಕೆ ಅಧೀನವಾಗಿದ್ದವೆಂದು ತೋರಿಸಲಾಗಿದೆ. ೬ನೇ ಕ್ರಮಾಂಕದ ಮಠದ ಪಂಥ ಯಾವುದೆಂದು ತಿಳಿದಿರುವುದಿಲ್ಲ. ಗೋಳಕಿ ಲಕ್ಷಾಧ್ಯಾಯಿ ವಂಶದ ಸಂಬಂಧ ೨ನೇ ಕ್ರಮಾಂಕದ ಅಖಿಲಾಂಡೇಶ್ವರಿಮಠ ಮತ್ತು ಕೊನೆಯ ಏಕವೀರಾಂಬಾ ಮಠಗಳೊಂದಿಗೆ ಇದ್ದಿತೆಂದು ತಿಳಿಯುವುದಕ್ಕೆ ಯಾವುದೇ ಆಧಾರವಿರುವುದಿಲ್ಲ. ಅಖಿಲಾಂಡೇಶ್ವರಿ ಮಠ ಮತ್ತು ಏಕವೀರಾಂಬ ಮಠಗಳ ಪರಂಪರೆಯಲ್ಲಿದ್ದ ಆಚಾರ್ಯರು ವೈದಿಕ ಕರ್ಮಗಳನ್ನು ಆಚರಿಸುತ್ತಿದ್ದರೆಂದು ಬಣ್ಣಿಸಲಾಗಿದೆ: ಅವರು ಶ್ರುತಿ ಮತ್ತು ಸ್ಮೃತಿಗಳ ನಿಷ್ಠಾವಂತ ಅನುಯಾಯಿಗಳಾಗಿದ್ದರಲ್ಲದೆ ಪಾಶುಪತ ವ್ರತವನ್ನೂ ಆಚರಿಸುತ್ತಿದ್ದರು. ಈ ಆಚಾರ್ಯರ ಸಾಧನೆಗಳಲ್ಲಿ ಅನೇಕ ಮಂಟಪ, ಸ್ತಂಭ ಮತ್ತು ಗುಡಿಗಳ ನಿರ್ಮಾಣ ಕಾರ್ಯಗಳಲ್ಲದೆ, ಪಾಸುಕ ಚಾತುರ್ಮಾಸ್ಯ ಮತ್ತು ವಾಜಪೇಯ ಯಜ್ಞ ಮಾಡಿದುದೂ ದಾಖಲಾಗಿರುತ್ತದೆ (ಮಹಾಲಿಂಗಂ, ೧೯೫೭). ಇಂಥ ಮಾಹಿತಿಯಿಂದ ಒಟ್ಟಾಗಿ ತಿಳಿದುಬರುವುದೇನೆಂದರೆ, ಈ ಮಠಗಳ ಆಚಾರ್ಯರು ವೈದಿಕಪಾಶುಪತ ಸಿದ್ಧಾಂತ ಅನುಯಾಯಿಗಳಾಗಿದ್ದರು.

೧೬ನೇ ಶತಮಾನದಲ್ಲಿ ತಿರುಚ್ಚತ್ತಿಮುರ್‍ರಂ ವಂಶದ ಅಧಿಪತಿಗಳಾಗಿದ್ದ ನಾರ್ಪತ್ತೆಣ್ಣಾಯಿರವನ್‌ಮಠದ ಬಗೆಗೆ ಮುಂದಿನ ಶತಮಾನಗಳಲ್ಲಿ ಏನೂ ಕೇಳಬರುವುದಿಲ್ಲ. ಸದ್ಯ ಈ ಕಟ್ಟಡವು ಕಾಮಕೋಟಿ ಪೀಠದ ಶಂಕರಾಚಾರ್ಯರ ವಶದಲ್ಲಿರುತ್ತದೆ. ವಿಜಯರಂಗ ಚೊಕ್ಕನಾಥ ನಾಯಕನ ಜಂಬುಕೇಶ್ವರಂ ದತ್ತಿ (ಕ್ರಿ.ಶ. ೧೭೦೮) ಶಾಸನವು ಅದು ಶಂಕರಾಚಾರ್ಯರ ಸ್ವಂತ ಮಠವೇ ಎಂದು ಹೇಳುತ್ತದೆ. ೧೬ನೇ ಶತಮಾನದ ಪ್ರಾರಂಭದಲ್ಲಿದ್ದ ಶಾಸನ (೧೯೦೮, ೪೮೬, ೪೮೭)ಗಳು ಆ ಕಟ್ಟಡವು ಸ್ಪಷ್ಟವಾಗಿ ಗೋಳಕಿಪಂಥದ ಅನುಯಾಯಿಗಳಿಗೆ ಸೇರಿರುತ್ತದೆಂಬುದನ್ನು ಲಕ್ಷಿಸಿ, ಆ ದತ್ತಿಶಾಸನವನ್ನು ಸಂಪಾದಿಸಿದ ವಿಶ್ವನಾಥ ಅವರು (೧೯೨೧/೨೨) ಅಲ್ಲಿಯ "ಸ್ವಂತ" ಪದದ ಸೇರಿಸುವಿಕೆಯು ಉದ್ದೇಶಪೂರ್ವಕವಾದದ್ದೆಂದು ಸಂಶಯಪಡುತ್ತಾರೆ.

**ಗೋಲಕಿಮಠಗಳ ವ್ಯವಸ್ಥೆಯ ಸ್ವರೂಪ :**

ಲಕ್ಷಾಧ್ಯಾಯಿಗೆ ಮತ್ತು ಗೋಳಕಿಪಂಥದ ಶಾಖೆಗಳಿಗೆ ಹೊಂದಿಕೊಂಡಿದ್ದ ಅನೇಕ ಮಠಗಳ ಉದ್ದೇಶ ಅಸಹಾಯಕ ವ್ಯಕ್ತಿಗೆ ಪ್ರಸಾದ ಒದಗಿಸುವುದು ಮತ್ತು ಒಂದಿಲ್ಲೊಂದು ರೀತಿಯ ಸಹಾಯ ಒದಗಿಸುವುದು ಆಗಿದ್ದಿತು. ಮಧ್ಯಯುಗದ ಶತಮಾನಗಳಲ್ಲಿ ಈ ಸಂಸ್ಥೆಗಳು ತಮಿಳುನಾಡಿನ ತುಂಬ ಪಸರಿಸಿದವು (ನಕಾಶೆ ೨). ಅನುಬಂಧ-೧ರಲ್ಲಿ ವಿವರಿಸಲಾದ ಶಾಸನಗಳು ಸ್ವಾಮಿಗಳ ಅಧಿಪತ್ಯದ ಮಠಗಳಲ್ಲಿ ಮಾಹೇಶ್ವರರು ವಾಸಿಸುತ್ತಿದ್ದರೆಂದು ಸೂಚಿಸುತ್ತದೆ. ಮಾಹೇಶ್ವರರನ್ನು ಉಣಿಸುವ ನಿರ್ದಿಷ್ಟ ಉದ್ದೇಶದಿಂದ ಕೊಡಲಾದ ದತ್ತಿಯನ್ನು ಸ್ವೀಕರಿಸಿದವರದು ಒಂದು ದೊಡ್ಡ ಗುಂಪೇ ಇದ್ದಿತು. 'ತಪಸ್ವಿ'ಗಳು, 'ಅಪೂರ್ವಿ'ಗಳು ಮತ್ತು 'ಶಿವಯೋಗಿ'ಗಳು ಕೂಡ ಕೆಲವು ಮಠಗಳಲ್ಲಿ ವಾಸವಾಗಿದ್ದರು. ಈ ಉಚಿತ ಪ್ರಸಾದ ವಸತಿ

ಸಂಸ್ಥೆಗಳಿಗೆ ಮೇಲಿಂದ ಮೇಲೆ ಭೆಟ್ಟಿಕೊಡುತ್ತಿದ್ದ 'ದೇಶಾಂತರಿ'ಗಳು ಕೂಡ ಅಲ್ಲಿ ಊಟಮಾಡಿ ವಾಸಿಸುತ್ತಿದ್ದರು. ಮಠದಲ್ಲಿ ವಾಸಿಸುತ್ತಿದ್ದವರಲ್ಲಿ ಆಂಡಾರರದು ಮತ್ತೊಂದು ತಂಡವಾಗಿದ್ದಿತು. ಅವರು ಕೆಳದರ್ಜೆಯವರಾಗಿದ್ದು, ಸಂಬಂಧಿಸಿದ ಮಠಗಳಿಗೆ ಜೋಡಿಸಲಾದ ಗುಡಿಗಳಲ್ಲಿ ವಿವಿಧ ಕೆಲಸಗಳನ್ನು ಮಾಡುತ್ತಿದ್ದರು. ಕೆಲವು ಸಂಸ್ಥೆಗಳಲ್ಲಿ ಕೀರ್ತನಕಾರರು, ನಿರ್ಗತಿಕರು, ದೇವರಡಿಯರ್‌ರು ಮತ್ತು ಪರದೇಶಿಗಳು ಕೂಡ ಆಶ್ರಯಪಡೆದಿದ್ದರು.

ಮಾಹೇಶ್ವರರು ಮತ್ತು ರುದ್ರರು, ಶೈವ ದೇವಾಲಯಗಳ ಮತ್ತು ಮಠಗಳ ಕಾರ್ಯನಿರ್ವಹಣೆಯಲ್ಲಿ ಇವರ ಪಾತ್ರ ಕುರಿತು ವಿವರ ಅಭ್ಯಾಸ ಮತ್ತೊಂದು ದೀರ್ಘ ಪ್ರಬಂಧದ ವಿಷಯವಾಗುತ್ತದೆ. ಒಟ್ಟಾಗಿ ಇವರು ಈ ಸಂಸ್ಥೆಗಳ ಕಾರ್ಯ ನಿರ್ವಹಣೆಯಲ್ಲಿ ಆಡಳಿತಾತ್ಮಕ ಜವಾಬ್ದಾರಿಯನ್ನು ಹೊತ್ತಿದ್ದರೆಂದು ಒತ್ತಿ ಹೇಳಿದರೆ ಇಲ್ಲಿ ಸಾಕಾಗುತ್ತದೆ. ಮಠ ಮತ್ತು ಅದರ ಜೊತೆಗಿದ್ದ ದೇವಾಲಯಗಳ ಸಂಬಂಧಗಳು ಪರಸ್ಪರ ಪೂರಕವಾಗಿದ್ದವು. ದೀಪಗಳನ್ನು ಉರಿಸುವುದಕ್ಕಾಗಿ (ನೊಂಡವಿಳಕ್ಕು) ಮಾಡಿದ ನಿರ್ದಿಷ್ಟ ದತ್ತಿಗಳನ್ನು ಹೊರತುಪಡಿಸಿ ದೇವಾಲಯ ಮತ್ತು ಮಠಗಳಿಗೆ ನೀಡಿದ ಎಲ್ಲ ದತ್ತಿಗಳನ್ನು ಮಾಹೇಶ್ವರರು ಸ್ವೀಕರಿಸುತ್ತಿದ್ದರು. ಈ ಎರಡನೆಯ ಪ್ರಕಾರದ ದತ್ತಿಗಳನ್ನು ಆರಾಧನೆಯ ಮುಖ್ಯ ಮಂದಿರ ಮತ್ತು ಉಪಮಂದಿರಗಳಲ್ಲಿ ಸ್ಥಾಪಿಸಲಾಗಿದ್ದ ಲಿಂಗಗಳ ನಿತ್ಯಪೂಜೆಯ ನಿರ್ವಹಣೆಯನ್ನು ವಹಿಸಿಕೊಂಡಿದ್ದ 'ಶಿವಬ್ರಾಹ್ಮಣ'ರು ಸ್ವೀಕರಿಸುತ್ತಿದ್ದರು. 'ಶಿವಬ್ರಾಹ್ಮಣ'ರನ್ನು ನಿಯಮಿಸುವಲ್ಲಿ, ದೇವಾಲಯದ ಹಣಕಾಸಿನ ವ್ಯವಹಾರವನ್ನು ನಿಯಂತ್ರಿಸುವಲ್ಲಿ, ಅದರ ಆಡಳಿತಾತ್ಮಕ ಮತ್ತು ಸಂಘಟನಾತ್ಮಕ ವಿಷಯಗಳಲ್ಲಿ, ನಿತ್ಯದ ಕಾರ್ಯನಿರ್ವಹಣೆಯಲ್ಲಿ ಅಂತಿಮ ಅಧಿಕಾರ ಮಾಹೇಶ್ವರರದೇ ಆಗಿದ್ದಿತು. ಸಂಕ್ಷಿಪ್ತವಾಗಿ ಹೇಳುವುದೆಂದರೆ, ದೇವಾಲಯ ಮತ್ತು ಮಠಸಂಕೀರ್ಣದ ಪರಮೋಚ್ಚ ರಕ್ಷಕರು ಮಾಹೇಶ್ವರರೇ ಆಗಿದ್ದರೆಂಬುದಕ್ಕೆ ಮಧ್ಯಯುಗದ ಶತಮಾನಗಳಲ್ಲಿ ಬರೆಸಲಾದ ತಮಿಳು ದತ್ತಿಶಾಸನಗಳಲ್ಲಿ "ಪಣ್ಮಾಹೇಶ್ವರ ರಕ್ಷೈ" ಪದಪುಂಜ ಸರ್ವತ್ರ ಬರುವುದೇ ಸಾಕ್ಷಿ.

ಗೋಳಕಿಪಂಥದ ಅನೇಕ ಆಚಾರ್ಯರು ಹೊಸ ದೇವಾಲಯ ಇಲ್ಲವೆ ಮಠಗಳನ್ನು ಕಟ್ಟಿಸಿದ ಶ್ರೇಯಸ್ಸಿಗೆ ಪಾತ್ರರಾಗಿದ್ದಾರೆ. ಜ್ಞಾನಾತ್ಮನ್ ಆಚಾರ್ಯನು ಉತ್ತರ ಆರ್ಕಾಟ್ ಜಿಲ್ಲೆಯ ತಿರುವಲ್ಲಂದಲ್ಲಿ ನಾಯಕ-ಶಿವಾಲಯವನ್ನು ನಿರ್ಮಿಸಿದನು (೧೮೯೦, ೩, ಕ್ರಿ.ಶ. ೧೩೧೪). ಈಶಾನ ಶಿವನು ಅದೇ ಜಿಲ್ಹೆಯ ಕುಲಂಬಂದಲ್‌ದಲ್ಲಿ ಶಿವನಿಗಾಗಿ ದೇವಾಲಯ ಕಟ್ಟಿಸಿದನು (೧೯೦೨, ೪೧೪, ಕ್ರಿ.ಶ. ೧೦೩೪). ಮೊದಲನೆಯ ಕುಲೋತ್ತುಂಗನ ರಾಜಗುರುವಾದ ಶ್ರೀಕಂಠಶಿವನು ಕುಲೋತ್ತುಂಗ-ಕೊಲಿಶ್ವರಂದಲ್ಲಿ ದೇವರನ್ನು ಸ್ಥಾಪಿಸಿದನು, (೧೯೦೭, ೩೦೧). ಅದೇ ಹೆಸರಿನ ಇನ್ನೊಬ್ಬ ಆಚಾರ್ಯನು ತಂಜಾವೂರು ಜಿಲ್ಹೆಯ ಅಚ್ಚುತಮಂಗಲಂದಲ್ಲಿ ಸೋಮನಾಥ ದೇವರನ್ನು ಸ್ಥಾಪಿಸಿದನು (೧೯೨೫, ೪೦೨, ಕ್ರಿ.ಶ. ೧೧೮೨). ವಾಮಶಿವನು ದಕ್ಷಿಣ ಆರ್ಕಾಟ್ ಜಿಲ್ಹೆಯ ತಿರುನಮನಲ್ಲೂರಲ್ಲಿ ತಾನೇ ಕಟ್ಟಿಸಿದ ಆರಾಧನಾ ಮಂದಿರದಲ್ಲಿ ಚಂದೇಶ್ವರನನ್ನು ಸ್ಥಾಪಿಸಿದನು. (೧೯೩೯/೪೦, ೨೪೧). ಅದೇ

ಸ್ಥಳದಲ್ಲಿ ಗಂಗೋಳಿಜ್ಞಾನಶಿವನು ವಿಶ್ವೇಶ್ವರದೇವರನ್ನು ಸ್ಥಾಪಿಸಿದನು (೧೯೩೯/೪೦, ೨೪೨); ಮೂರನೆಯ ಕುಲೋತ್ತುಂಗನ ಸಮಕಾಲೀನ ಈಶಾನಶಿವನು ತಿರುಜ್ಞಾನಸಂಬಂಧಮ್-ಗುಕೈ ಹೆಸರಿನ ಸನ್ಯಾಸಿಮಠವನ್ನು ಕಟ್ಟಿಸಿದನು (೧೯೨೭/೮, ೩೧೧, ಕ್ರಿ.ಶ. ೧೨೦೭); ಶ್ರೀ ಮಾಹೇಶ್ವರಸ್ಥಾನಂ (ಶಿವಪದಶೇಖರ ಮಂಗಲಂ)ದ ವಿದ್ಯಾಶಿವನು ತಂಜಾವೂರು ಜಿಲ್ಹೆಯ ಉದ್ಯೆಯಲುರ್‌ಲ್ಲಿ ಅಭಿಮುಕ್ತನ್ ಮಠವನ್ನು ಸ್ಥಾಪಿಸಿದನು (೧೯೨೭, ೩೧೧, ಕ್ರಿ.ಶ. ೧೨೮೩); ಅದೇ ಜಿಲ್ಹೆಯ ನೊಡಿಯುರ್‌ದಲ್ಲಿ ವಾಗೀಶಪ್ಪೆರುಮಾಳ್‌ನು ತಿರುಜ್ಞಾನಸಂಬಂಧನ್‌ಮಠವನ್ನು ಸ್ಥಾಪಿಸಿದನು (೧೯೩೨/೩, ೧೯೯, ಕ್ರಿ.ಶ. ೧೨೩೬).

ಈ ಸನ್ಯಾಸಿಮಠಗಳೊಂದಿಗೆ ಸಂಬಂಧ ಹೊಂದಿದ್ದ ಕೆಲವು ಧಾರ್ಮಿಕ ಆಚಾರ್ಯರ ವಿದ್ಯೆ ಮತ್ತು ಸಾಧನೆಗಳ ನಸುನೋಟವೂ ನಮಗೆ ಸಿಗುತ್ತದೆ. ಮೂರನೆಯ ಕುಲೋತ್ತುಂಗನ ರಾಜಗುರುವಾದ ಈಶ್ವರ ಶಿವನು (ಸೋಮೇಶ್ವರ) ಶೈವದರ್ಶನ ಮತ್ತು ಹದಿನೆಂಟು ವಿದ್ಯೆ (ಪುರಾಣ)ಗಳಲ್ಲಿ ಪರಿಣತನಾಗಿದ್ದನು. ಉಪನಿಷತ್ತುಗಳಲ್ಲಿ ಬೋಧಿಸಿದಂತೆ ಶಿವನ ಮಹತಿಯನ್ನು ಕುರಿತು ವ್ಯಾಖ್ಯಾನ ಮಾಡುತ್ತಿದ್ದನು (೧೯೦೭, ೧೯೦). ತಿರುಕ್ಕಡೈಯುರಗ್ರಾಮದಲ್ಲಿಯ ಮಾರ್ಕಂಡೇಯನ್ ಮಠದಲ್ಲಿ ವಾಸವಾಗಿದ್ದ ಶಿವಯೋಗಿಗಳು ವೇದಗಳಲ್ಲಿ ನಿಪುಣರಾಗಿದ್ದರು (೧೯೨೫, ೨೪೩, ಕ್ರಿ.ಶ. ೧೧೯೬). ಅಘೋರಶಿವನಿಗೆ "ವೈದ್ಯಚಕ್ರವರ್ತಿ" ಎಂಬ ಬಿರುದಿದ್ದಿತು. ಆ ಬಿರುದು ಅವನು ಔಷಧ ವಿಜ್ಞಾನದಲ್ಲಿ ನಿಪುಣನಿದ್ದನೆಂಬುದನ್ನು ಸೂಚಿಸುತ್ತದೆ (೧೯೦೨, ೫೭೫, ಕ್ರಿ.ಶ. ೧೨೮೭). ನಿಜಸಂಗತಿ ಎಂದರೆ, ತಿರುವಾವದುತುರೈಯಲ್ಲಿಯ ಒಂದು ಮಠದಲ್ಲಿ ಔಷಧಿ ಅಭ್ಯಾಸವನ್ನು ಪಾಠಕ್ರಮದಲ್ಲಿ ಅಳವಡಿಸಲಾಗಿದ್ದಿತು (೧೯೨೫, ೧೫೯, ಕ್ರಿ.ಶ. ೧೧೨೦).

**ತಿರುಜ್ಞಾನಮ್** ಗ್ರಂಥವು ಗೋಳಕಿಪಂಥದ ಶಿಷ್ಯರಿಗೆ ಮೆಚ್ಚುಗೆಯ ಪಠ್ಯ ಆಗಿದ್ದುದು ಸ್ಪಷ್ಟವಿರುತ್ತದೆ. ಈ ಗ್ರಂಥದ ವಿಷಯವ್ಯಾಪಕತೆ ಮತ್ತು ಅದರಲ್ಲಿರುವ ವಿಷಯಗಳ ಬಗೆಗೆ ಗೊತ್ತಿರದಿದ್ದರೂ, ಅದು ಆಳುದ್ಯೆಯಪ್ಪಿಳ್ಳೈಯ **ತಿರುಪ್ಪಡಿಯುಮ್**‌ಗ್ರಂಥಕ್ಕಿಂತ ಭಿನ್ನವಾಗಿದ್ದಿತೆಂಬುದನ್ನು ಬೇರೆಡೆ ತೋರಿಸಲಾಗಿದೆ (ಸ್ವಾಮಿ, ೧೯೭೧,/೧೯೭೨). ತಿರುವಲೀಶ್ವರಮ್‌ದಲ್ಲಿಯ ವಲೀಶ್ವರದೇವಾಲಯದಲ್ಲಿ ತಿರುಜ್ಞಾನಮ್‌ಗ್ರಂಥ ಪಠಿಸಲು ಗೋಳಕಿಯ ಆಚಾರ್ಯ ಪುಕಲಿಪ್ಪೆರುಮಾಳ್‌ನನ್ನು ನೇಮಿಸಲಾಗಿತ್ತು (೧೯೧೬, ೩೫೫, ಕ್ರಿ.ಶ. ೧೨೫೬). ತಿರುನೆಲ್ವೆಲಿಯ ನೆಲ್ಲಿಯಪ್ಪರ್ ದೇವಾಲಯದಲ್ಲಿ ಈ ಪಠ್ಯವನ್ನು ಓದುವುದಕ್ಕಾಗಿ ಗೋಳಕಿಪಂಥವು ವಿವಿಧ ಮಠಗಳ ಹನ್ನೊಂದು ಶಿಷ್ಯರ ಮೈತ್ರಿಕೂಟವನ್ನು ಮಾಡಿಕೊಂಡಿದ್ದಿತು (೧೮೯೪, ೧೩೧, ೧೩೨). ಅದೇ ಪಠ್ಯದ ಮೇಲೆ ತಿರುಚೆಂದುರ್ ತಾಲೂಕಿನ ಅತ್ತೂರ ಗ್ರಾಮದಲ್ಲಿದ್ದ ಸೋಮನಾಥದೇವ ಗುಡಿಯಲ್ಲಿ ವ್ಯಾಖ್ಯಾನ ಕೂಡ ಮಾಡಲಾಗುತ್ತಿತ್ತು (೧೯೨೯/೩೦, ೪೬೩).

## ಗೋಳಕಿಧರ್ಮ

ಆಂಧ್ರ ಮತ್ತು ತಮಿಳುನಾಡಿನಲ್ಲಿರುವ ಗೋಳಕಿವಂಶ ಮತ್ತು ಮಠಗಳನ್ನು ಅನೇಕ ಶಾಸನಗಳು ಉಲ್ಲೇಖಿಸುತ್ತಿದ್ದರೂ ಅವು ಗೋಳಕಿ ಧರ್ಮದ ನಿರ್ದಿಷ್ಟ ಸಿದ್ಧಾಂತದ ಬಗೆಗೆ ಮಾಹಿತಿ ನೀಡದಿರುವುದು ದುರ್ದೈವದ ಸಂಗತಿ. ರಾಮನಾಥಪುರಂ ಜಿಲ್ಲೆಯ ತಿರುಪತ್ತುರ್‌ದಲ್ಲಿಯ ಕಲ್ಲುಮಠದಲ್ಲಿ ವಾಸಿಸುತ್ತಿದ್ದ ಈಶಾನಶಿವನೆಂಬ ಆಚಾರ್ಯನು ಲಕ್ಷಾಧ್ಯಾಯಿವಂಶ ಮತ್ತು ಗೋಳಕಿಧರ್ಮಕ್ಕೆ ಸೇರಿದ್ದನೆಂದು ಹೇಳಲಾಗಿದೆ (೧೯೩೫/೬, ೧೭೮). ಈ ಸಂದರ್ಭದಲ್ಲಿ 'ಧರ್ಮ'ಪದವು ತುಸುಮಟ್ಟಿಗೆ 'ಪಂಥ' ಪದಕ್ಕೆ ಸಮಾನವಾಗಬಹುದಾದರೂ, ಆ ಪಂಥಕ್ಕೆ ತನ್ನದೇ ಆದ ನಿರ್ದಿಷ್ಟ ತತ್ತ್ವ ಮತ್ತು ಸಿದ್ಧಾಂತಗಳಿದ್ದವೆಂದು ನಿರೀಕ್ಷಿಸುವುದು ಸಹಜ. ಕಾಕತೀಯ ರಾಣಿ ರುದ್ರಮದೇವಿಯ ರಾಜಗುರು ವಿಶ್ವೇಶ್ವರಶಿವನು ಮತ್ತೊಬ್ಬ ಗೋಳಕಿಯ ಆಚಾರ್ಯನಾಗಿದ್ದು, ಅವನು ಒಂದು 'ಶುದ್ಧಶೈವ' ಮಠವನ್ನು ಕಟ್ಟಿಸಿದನೆಂದು ಹೇಳಲಾಗಿದೆ (೧೯೧೭, ೯೪, ಕ್ರಿ.ಶ. ೧೨೬೧, ರಾಮಯ್ಯ ಪಂತಲು, ೧೯೩೦).

ಕಲಚೂರಿ-ಚೇದಿ ಅವಧಿಯ ಲಭ್ಯ ಶಾಸನಗಳನ್ನು ವಿಮರ್ಶಾತ್ಮಕ ಟೀಕೆಯೊಂದಿಗೆ ಸಂಗ್ರಹಿಸಿದ ಮಿರಾಶಿ (೧೯೫೫) ಅವರು "ಮತ್ತಮಯೂರ ಪಂಥದ ಆಚಾರ್ಯರು ಪಶುಪತಪಂಥ ಸೇರಿದವರಲ್ಲ, ಶೈವಧರ್ಮಕ್ಕೆ ಸೇರಿದವರೆಂದು" ನಿರ್ಣಯಿಸುತ್ತಾರೆ. ಮತ್ತಮಯೂರಪಂಥದ ಆಚಾರ್ಯರು ಶಂಖಮಠ, ತೇರಂಬಿಮಠ, ಆಮರ್ದಕಮಠ ಮುಂತಾದ ಸಣ್ಣವರ್ಗದ ಮಠಗಳನ್ನು ಸ್ಥಾಪಿಸಿದರು. ಗೋಳಕಿಮಠ ಬೇರೇನೂ ಆಗಿರದೆ ಮತ್ತಮಯೂರ ಪಂಥಕ್ಕೆ ಸೇರಿದ ಸದ್ಭಾವಶಂಭು ಸ್ಥಾಪಿಸಿದ ಇನ್ನೂ ಒಂದು ಸಂಸ್ಥೆ ಆಗಿದ್ದಿತು. ಆದ್ದರಿಂದ ಈ ಪಂಥಗಳ ಮೂಲ ಸಿದ್ಧಾಂತಗಳು ಒಂದಕ್ಕೊಂದು ಭಿನ್ನವಾಗಿರಲಾರವು.

ಪ್ರೊ. ಮಿರಾಶಿಯವರ ಬೃಹತ್ ಪ್ರಬಂಧದಿಂದ ತಿಳಿದು ಬರುವಂತೆ, ಮತ್ತಮಯೂರ ಮತ್ತು ಗೋಳಕಿಪಂಥಗಳ ಆಚಾರ್ಯರು ದೇವಾಲಯ ಮತ್ತು ಮಠಗಳನ್ನು ಕಟ್ಟಿಸಿದರಲ್ಲದೆ, ಹೂದೋಟ ಮತ್ತು ಪ್ರಸಾದ ನಿಲಯಗಳ ಉಸ್ತುವಾರಿಯನ್ನೂ ಮಾಡಿದರು, ಔಷಧಾಲಯಗಳನ್ನೂ ತೆರೆದರು, ಅಸಹಾಯಕರಿಗೆ ಆಶ್ರಯ ನೀಡಿದರು, ಸಾಹಿತ್ಯ ಮತ್ತು ವ್ಯಾಕರಣ ಮುಂತಾದ ವಾಙ್ಮಯ ಶಿಸ್ತುಗಳ ಬೋಧನೆಯ ಜೊತೆಗೆ ಧಾರ್ಮಿಕ ಪಠ್ಯಗಳ ಬೋಧನೆಯ ಪೀಠಗಳನ್ನೂ ಸ್ಥಾಪಿಸಿದರು. ಆಂಧ್ರಪ್ರದೇಶ ಮತ್ತು ತಮಿಳುನಾಡಿನಲ್ಲಿ ಗೋಳಕಿ ಆಚಾರ್ಯರ ಚಟುವಟಿಕೆಗಳು ಡಹಳ (ಚೇಡಿ) ಪ್ರದೇಶದಲ್ಲಿದ್ದ ಅವರ ಪೂರ್ವಜರ ಚಟುವಟಿಕೆಗಳಿಗಿಂತ ಯಾವುದೇ ವಿಧದಲ್ಲಿ ಭಿನ್ನವಾಗಿರಲಿಲ್ಲ ಎಂಬುದನ್ನು ಜ್ಞಾಪಿಸಿಕೊಳ್ಳಬೇಕು.

ಮತ್ತಮಯೂರ ಪಂಥದ ಆಚಾರ್ಯರು ಕಠೋರ ವ್ರತಗಳನ್ನು ಆಚರಿಸಿದ್ದರು. ಶಿಖಾ ಶಿವನನ್ನು ಅಗ್ನಿಗೆ ಹೋಲಿಸಲಾಗಿದೆ. ಅವನು ತನ್ನ ತಪಸ್ಸಿನ ಪ್ರಕಾಶದಿಂದ, ಅಂತಿಮ ಪರಮಾನಂದದ ಮಾರ್ಗವನ್ನು ಬೆಳಗಿಸುತ್ತಿದ್ದ ಮತ್ತು ಅಜ್ಞಾನದ ಗಾಢ ಅಂಧಕಾರವನ್ನು

ಹೊಡೆದೋಡಿಸುತ್ತಿದ್ದ ಜ್ಯೋತಿಯ ಗುಣವನ್ನು ಪಡೆದವನಾಗಿದ್ದನು. (ಪ್ರಶಾಂತ ಶಿವನ ಚಂದ್ರಹೆ ಶಾಸನ EI, XXI, No 23). ಈ ಪಂಥದ ಆಚಾರ್ಯರು ಆಧ್ಯಾತ್ಮಿಕ ಕ್ಷೇತ್ರದಲ್ಲಿ ಉಚ್ಚ ಸಿದ್ಧಿಯನ್ನು ಪಡೆದಿದ್ದವರಲ್ಲದೆ, ಧಾರ್ಮಿಕ ಸಾಹಿತ್ಯದಲ್ಲಿ ಪ್ರಚಂಡ ಪಂಡಿತರಾಗಿದ್ದರು. ಕಲಚೂರಿ ಅರಸು ಜಯಸಿಂಹನ ರಾಜಗುರುವಾದ ವಿಮಲಶಿವನು ವೈದಿಕ ಪಂಡಿತರ ಕುಟುಂಬದಲ್ಲಿ ಜನಿಸಿದ್ದನು. ಮತ್ತು ಅವನು ಸ್ವತಃ ವೈದಿಕ ಪಾಂಡಿತ್ಯದಲ್ಲಿ ನಿಷ್ಣಾತನಿದ್ದನು. ಈ ಆಚಾರ್ಯರು ಶೈವಪಂಥದ ಅನುಯಾಯಿಗಳಾಗಿದ್ದರೂ ಅವರು ಅಂಧಾಭಿಮಾನಿಗಳಾಗಿರಲಿಲ್ಲ. ಅವರು ವಿವಿಧ ಸಾಂಪ್ರದಾಯಿಕ ಮತ್ತು ಅಸಾಂಪ್ರದಾಯಿಕ ದರ್ಶನ ಪದ್ಧತಿಗಳನ್ನು ಅಭ್ಯಸಿಸಿದ್ದರು. ಕಲಚೂರಿ ಅರಸು ಮೊದಲನೆಯ ಜಜಲ್ಲದೇವನ ರಾಜಗುರುವಾದ ರುದ್ರಶಿವನನ್ನು "ಅವನು ತನ್ನ ಪಂಥದ ಸಿದ್ಧಾಂತಗಳನ್ನಷ್ಟೇ ಬಲ್ಲವನಾಗಿರದೆ, ಅನ್ಯ ಪಂಥಗಳ ಸಿದ್ಧಾಂತಗಳನ್ನೂ ಬಲ್ಲವನಾಗಿದ್ದನು, ಅದೂ ಅಲ್ಲದೆ, ದಿನ್ನಾಗ ಮೊದಲಾದವರ ಪ್ರಭುತ್ವಪೂರ್ಣ ಗ್ರಂಥಗಳನ್ನು ಚೆನ್ನಾಗಿ ಓದಿದ್ದನು" ಎಂದು ಬಣ್ಣಿಸಲಾಗಿದೆ. ಹೀಗೆ, ಪ್ರಬೋಧಶಿವನು ಮತ್ತಮಯೂರ ಪಂಥದ ಕುಲಗುರುವಾಗಿದ್ದರೂ ಅವನು ತನ್ನ ಸಮಯವನ್ನು ಪಾಶುಪತದ ಪಂಚಾರ್ಥಿಕ ದರ್ಶನದಲ್ಲಿ ನಿಪುಣರಿದ್ದವರ ಮಧ್ಯೆ ಕಾಲಕಳೆಯುತ್ತಿದ್ದನೆಂದು ತೋರುತ್ತದೆ.

ಮತ್ತಮಯೂರ/ಗೋಳಕಿ ಆಚಾರ್ಯರ ಸೈದ್ಧಾಂತಿಕ ದರ್ಶನ ಮೂರು ತತ್ತ್ವಗಳನ್ನು ಪ್ರತಿಪಾದಿಸುತ್ತದೆ: ಪತಿ (ಒಡೆಯ), ಪಶು(ವೈಯಕ್ತಿಕ ಆತ್ಮ) ಮತ್ತು ಪಾಶ (ಸಂಕೋಲೆ) ಮತ್ತು ಇಡಿ ದರ್ಶನವನ್ನು ನಾಲ್ಕು ಪಾದಗಳಲ್ಲಿ ವಿಭಜಿಸಲಾಗಿದೆ—ವಿದ್ಯಾ ( ಮೂರು ಪದಾರ್ಥಗಳ ಸರಿಯಾದ ಜ್ಞಾನ), ಕ್ರಿಯಾ (ದೀಕ್ಷಾ ಮುಂತಾದ ಆಚರಣೆಗಳು), ಯೋಗ (ಧ್ಯಾನ) ಮತ್ತು ಚರ್ಯಾ(ವಿಧಿಸಿರುವುದನ್ನು ಆಚರಿಸುವಲ್ಲಿಯ ನಿಷೇಧಿಸಿದುದನ್ನು ಆಚರಿಸದಿರುವಲ್ಲಿಯ ಶಿಸ್ತು). ಬೇರೆ ಮಾತಿನಲ್ಲಿ ಹೇಳುವುದಾದರೆ, ಆ ಕಾಲದಲ್ಲಿ ಮತ್ತು ನಂತರದ ಕಾಲದಲ್ಲಿ ಸಾಧಿಸಿದ ಪರಿಪೂರ್ಣತೆಯನ್ನು ಪಡೆಯದಿದ್ದರೂ, ಮತ್ತಮಯೂರ/ಗೋಳಕಿ ಆಚಾರ್ಯರ ಸೈದ್ಧಾಂತಿಕ ದರ್ಶನ ಸಾರಭೂತವಾಗಿ ಆಗಮಕೇಂದ್ರಿತ ಶೈವಧರ್ಮ ಮತ್ತು ತತ್ತ್ವ ಆಗಿದ್ದಿತು.

೯ರಿಂದ ೧೨ನೇ ಶತಮಾನಗಳ ಮಧ್ಯದಲ್ಲಿ ಶೈವಪಂಥಕ್ಕೆ ಸಂಬಂಧಿಸಿದ ಧಾರ್ಮಿಕ ಮತ್ತು ತಾತ್ತ್ವಿಕ ಸಾಹಿತ್ಯ ಸಂಸ್ಕೃತದಲ್ಲಿ ಹುಲುಸಾಗಿ ಬೆಳೆಯಿತು. ಆ ಸಾಹಿತ್ಯದ ಲೇಖಕರು ಗೋಳಕಿ ಅಥವಾ ಅದರ ಸಮಾನ ಅಥವಾ ಅದರ ಮೂಲಪಂಥಗಳಿಗೆ ಸಂಬಂಧಿಸಿದವರಾಗಿದ್ದರು. ಅವರಲ್ಲಿ ಕೆಲವರು ಆಂಧ್ರಪ್ರದೇಶ ಮತ್ತು ತಮಿಳುನಾಡುಗಳಲ್ಲಿ ವಾಸವಾಗಿದ್ದರು. ಸದ್ಯೋಜಾತ ಮತ್ತು ಭೋಜರಾಜ ಆಚಾರ್ಯರು, ಇವರ ಅನೇಕ ಶಿಷ್ಯಲೇಖಕರೂ ಅವರ ಬಗೆಗೆ ಗೌರವ ಮತ್ತು ಕೃತಜ್ಞತೆಯಿಂದ ಬರೆದುದರಿಂದ ಅವರು ಅತ್ಯಂತ ಪ್ರಾಚೀನರಾಗಿದ್ದರೆಂದು ತೋರುತ್ತದೆ. ಸದ್ಯೋಜಾತ ಶಿವನು ಮೋಕ್ಷಕಾರ್ತಿಕಾ, ಪರಮೋಕ್ಷ ನಿರಸಕಾರಿಕಾ, ತತ್ತ್ವತ್ರಯ ನಿರ್ಣಯ, ತತ್ತ್ವಸಮಗ್ರ, ಕಾರವಾಗಮವೃತ್ತಮತ್ತು

ಇನ್ನೂ ಕೆಲವು ಕೃತಿಗಳ ಕರ್ತೃ ಎಂಬ ಶ್ರೇಯಸ್ಸಿಗೆ ಪಾತ್ರನಾಗಿದ್ದಾನೆ. **ತತ್ತ್ವತ್ರಯನಿರ್ಣಯವು** ಪತಿ-ಪಶು-ಪಾಶ ಕಲ್ಪನೆಯ ವಿವರಣೆಗೆ ಮೀಸಲಾಗಿದೆ. **ತತ್ತ್ವಸಮಗ್ರವು** ೩೬ ತತ್ತ್ವಗಳನ್ನು ಪ್ರತಿಪಾದಿಸುತ್ತದೆ. ಈ ಎರಡು ಗ್ರಂಥಗಳ ಮೇಲೆ ಟೀಕೆ ಬರೆದ ಅಘೋರಶಿವನು, ಅವು **ಸ್ವಾಯಂಭುವಾಗಮವನ್ನಾಧರಿಸಿ** ಬರೆಯಲಾಗಿವೆ ಎಂದು ಹೇಳುತ್ತಾನೆ. ಆಚಾರ್ಯ ಭೋಜರಾಜನು (ಸಂಸ್ಕೃತ **ಕಂಠಾಭರಣದ** ಕರ್ತೃವಾದ ಮಾಳವದ ಅರಸನಿಂದ ಬೇರೆ) **ತತ್ತ್ವಪ್ರಕಾಶ** ಗ್ರಂಥ ಬರೆದಿದ್ದಾನೆ. ಅಘೋರಶಿವನು ಈ ಗ್ರಂಥದ ಮೇಲಿನ ಟೀಕೆಯಲ್ಲಿ ಹೇಳುವಂತೆ, ಭೋಜರಾಜನು ವಿಂಧ್ಯಗಳಲ್ಲಿದ್ದ ಉತ್ತುಂಗಶಿವನ ಶಿಷ್ಯನಾಗಿದ್ದನು. (ಸಾಯಣ ಮಾಧವನದೆಂದು ಹೇಳಲಾದ **ಸರ್ವದರ್ಶನ ಸಂಗ್ರಹ** ಗ್ರಂಥವು ಅಘೋರಶಿವನ ಟೀಕಾಗ್ರಂಥದಿಂದ ಬಹಳಷ್ಟು ವಿಷಯವನ್ನು ತೆಗೆದುಕೊಂಡಿದೆ). ಶ್ರೀಕಂಠಸೂರಿಯ **ರತ್ನತ್ರಯವು** ಶಿವ-ಶಕ್ತಿ-ಬಿಂದುವಿನ ವಿವರಣೆಯನ್ನು ಕೊಡುತ್ತದೆ. ಸೋಮಶಂಭು **ಕರ್ಮಕ್ರಿಯಾಕಾಂಡದ** ಕರ್ತೃವಾಗಿದ್ದು (ಕ್ರಿ.ಶ. ೧೦೭೩), ಇದರಲ್ಲಿಯ ವಿಷಯಗಳನ್ನು ಅಘೋರಶಿವ ಈಶಾನಶಿವ ಮತ್ತು **ಸರ್ವದರ್ಶನಸಂಗ್ರಹದ** ಕರ್ತೃ ಬಳಸಿಕೊಂಡಿದ್ದಾರೆ. ಅವನ (ಸೋಮಶಂಭುವಿನ) ಗುರುವು ಸಾ-ಶಿವನಾಗಿದ್ದನು. ಸಾ-ಶಿವನ ಗುರುವು ಈಶಾನಶಿವನಾಗಿದ್ದನು. ಸೋಮಶಂಭುವು ಗೋಳಕಿಮಠದ ಸ್ಥಾಪಕನಾದ ಸದ್ಭಾವಶಂಭು (ಸಾ-ಶಿವ?)ವಿನ ವಂಶಕ್ಕೆ ಸೇರಿದ್ದನೆಂದು ತಿಳಿದುಬರುತ್ತದೆ.

ಈಶಾನಶಿವನು (ಬಹುಶಃ ಮೊದಲನೆಯ ರಾಜರಾಜನ ರಾಜಗುರುವೆಂದು ಗುರುತಿಸಲ್ಪಡುವ) ತನ್ನ ಹೆಸರಿನ ಪದ್ಧತಿ ಅರ್ಥಾತ್ **ಈಶಾನ ಶಿವಗುರುದೇವಪದ್ಧತಿ** ಎಂಬ ಗ್ರಂಥ ಬರೆದಿದ್ದಾನೆ. ಅಘೋರಶಿವನು **ಕ್ರಿಯಾಕ್ರಮದ್ಯೋತಿಕ** (ಅಘೋರಶಿವ ಪದ್ಧತಿ ಎಂದೂ ಕರೆಯಲಾದ ) (ಕ್ರಿ.ಶ. ೧೧೫೮) **ರತ್ನತ್ರಯವೃತ್ತಿ, ತತ್ತ್ವನಿರ್ಣಯವ್ಯಾಖ್ಯ, ದೀಕ್ಷಾವಿಧಿ ಮೃಗೇಂದ್ರವೃತ್ತಿ ದೀಪಿಕಾ** ಮುಂತಾದ ಗ್ರಂಥಗಳ ಕರ್ತೃವಾಗಿದ್ದಾನೆ. ಕೆಲವು ಲೇಖಕರ ಪ್ರಕಾರ (ಉದಾ. ನಂದಿಮಠ, ೧೯೪೪) ಈ ಆಚಾರ್ಯನು ಚಿದಂಬರಮ್‌ದಲ್ಲಿಯ ಮಠದಲ್ಲಿದ್ದನು ಮತ್ತು ಆಮರ್ದಕ ಸಂಪ್ರದಾಯದ ಶಿಷ್ಯನಾಗಿದ್ದನು. ಅವನು ಶ್ರೀಕಂಠ, ಧ್ಯಾನಶಿವ, ಹೃದಯಸಂಸ್ಕಾರ, ಪರಮಶಿವ ಅಥವಾ ಸರ್ವಾತ್ಮಶಿವ—ಇವರೆಲ್ಲ ತನ್ನ ಪೂರ್ವಜರೆಂದು ತನ್ನ **ಮಹೋತ್ಸವವಿಧಿಯಲ್ಲಿ** ಹೇಳುತ್ತಾನೆ.

ತ್ರಿಲೋಚನಶಿವನು **ಪ್ರಾಯಶ್ಚಿತ್ತಸಮುಚ್ಚಯ, ಸಿದ್ಧಾಂತಸಾರಾವಲಿ** ಮತ್ತು **ರತ್ನತ್ರ್ಯೋದ್ಯೋತ** ಗ್ರಂಥಗಳ ಕರ್ತೃವಾಗಿದ್ದಾನೆ. ಅವನು ತಾನು ಅಘೋರಶಿವನ ವಂಶಕ್ಕೆ ಸೇರಿದವನೆಂದೂ ಆಮರ್ದಕಮಠದ ನಿವಾಸಿ ಆಗಿರುವೆನೆಂದೂ ಹೇಳಿಕೊಳ್ಳುತ್ತಾನೆ. ದುರ್ವಾಸ, ವ್ಯಾಪಕೇಶಾನ, ಸರ್ವೇಶ, ಉತ್ತುಂಗ ಶಂಕರ, ಸೋಮೇಶಾನ, ಸರ್ವಾತ್ಮ ಮತ್ತು ಅಘೋರಶಿವ ಇವರು ತನ್ನ ಗುರುಪರಂಪರೆಗೆ ಸೇರಿದವರೆಂದು ಹೇಳುತ್ತಾನೆ.

ಶೈವಸಿದ್ಧಾಂತದ ಮೇಲೆ ತಮಿಳುಭಾಷೆಯಲ್ಲಿ ಬರೆದ ಕೃತಿಗಳು ೧೨ನೇ ಶತಮಾನದಲ್ಲಿ ಹೊರಬರಲು ಪ್ರಾರಂಭವಾಗಿ ಮುಂದಿನ ಎರಡು ಶತಮಾನಗಳಲ್ಲಿ ಮುಂದುವರಿದವು. ಶೈವ

ಸಿದ್ಧಾಂತದ ಮೇಲಿನ ೧೪ ಸೈದ್ಧಾಂತಿಕ ಪಠ್ಯಗಳು (ಆಧುನಿಕ ಭಾಷೆಯಲ್ಲಿ ಶೈವಸಿದ್ಧಾಂತ ಪಠ್ಯಗಳೆಂದು ತಿಳಿಯಲಾದ) ನಿರ್ಮಾಣವಾದದ್ದು ಈ ಕಾಲಾವಧಿಯಲ್ಲೇ. ಇವುಗಳಲ್ಲಿ ಬಹಳಷ್ಟು ಕೃತಿಗಳು ಮೇಲೆ ಹೇಳಿದ ಸಂಸ್ಕೃತ ಪಠ್ಯಗಳಲ್ಲಿ ವಿವರಿಸಲಾದ ಪತಿ-ಪಶು-ಪಾಶ, ೩೬ ತತ್ತ್ವಗಳು, ಐದು ಪವಿತ್ರ ವರ್ಣಗಳು (ಪಂಚಾಕ್ಷರ) ಮುಂತಾದವು, ಮೂಲದ ಸಂದರ್ಭ ಮತ್ತು ಅರ್ಥಗಳನ್ನೊಳಗೊಂಡ ಪರಿಕಲ್ಪನೆಗಳನ್ನು ಕುರಿತು ಬರೆಯಲಾಗಿವೆ. ಅವುಗಳಲ್ಲಿ ಒಂದೆರಡು ತಮ್ಮ ಪಂಥದ ಸಿದ್ಧಾಂತದ ಗರಿಮೆಯನ್ನು ಸ್ಥಾಪಿಸುವ ಉದ್ದೇಶದಿಂದ ಶೈವ ಮತ್ತು ಶೈವೇತರ ಸಿದ್ಧಾಂತಗಳ ವಿಭಿನ್ನ ಪಂಥಗಳ ತೌಲನಿಕ ಅಭ್ಯಾಸಕ್ಕೆ ಯತ್ನಿಸುತ್ತವೆ.

ತಿರುವೀಯಲೂರ್ ಉಯ್ಯವಂಡದೇವ(೧೨ನೇ ಶತಮಾನ, ಕ್ರಿ.ಶ. ೧೧೪೭)ನು ಪತಿ-ಪಶು-ಪಾಶ ಮತ್ತು ಅಂತಿಮ ಸತ್ಯದ ಸಾಕ್ಷಾತ್ಕಾರ ಕುರಿತು **ತಿರುವುಂದಿಯಾರ್** ಗ್ರಂಥ ರಚಿಸಿದನು. ತಿರುಕ್ಕಡವುರ್ ಉಯ್ಯವಂಡಾರ್ (ತಿರುವೀಯಲೂರ್ ಉಯ್ಯವಂಡಾರ್‌ನ ಶಿಷ್ಯನ ಶಿಷ್ಯನೆಂದು ಹೇಳಲಾದ)ನು **ತಿರುಕ್ಕಳಿರ್ರುಪ್ಪಡಿಯಾರ್** ಕರ್ತೃವಾಗಿದ್ದು, ಅವನ ಈ ಕೃತಿಯು ತಿರುವುಂದಿಯಾರ್ ನಿರೂಪಿಸಿದ ವಸ್ತುವನ್ನು ವಿವರಿಸುವುದರ ಜೊತೆಗೆ (ಸತ್ಯದ) ಸಾಕ್ಷಾತ್ಕಾರದಲ್ಲಿ ಯೋಗದ ಮಹತ್ವವನ್ನು ಒತ್ತಿಹೇಳುತ್ತದೆ. ಮೆಯ್ಕಂಡನ **ಶಿವಜ್ಞಾನ ಬೋಧಮ್**, ಅರುಣಂಡಿ ಶಿವಾಚಾರ್ಯನ **ಶಿವಜ್ಞಾನ ಸಿದ್ಧಿಯಾರ್** ಮತ್ತು **ಇರುಪಾ-ಇರುಪಡು** ಮತ್ತು ತಿರುವಡಿಕ್ಕೈ ಮಣವತಕಮ್ ಕಡಂದಾರ್‌ನ **ಉಣ್ಮೈವಿಲಕ್ಕಮ್** ಕೃತಿಗಳು ೧೩ನೇ ಶತಮಾನದಲ್ಲಿ ಪ್ರಕಟವಾದವು. ಉಳಿದ ಎಂಟು ಕೃತಿಗಳ ಕರ್ತೃ ೧೪ನೇ ಶತಮಾನದ ಪೂರ್ವದಲ್ಲಿ ಇದ್ದ ಉಮಾಪತಿ ಶಿವಾಚಾರ್ಯನಾಗಿದ್ದಾನೆ. (ಆದಾಗ್ಯೂ ಉಣ್ಮೈನೆರಿವಿಳಕ್ಕಮ್ ವಿಷಯದಲ್ಲಿ ಸಂಶಯ ವ್ಯಕ್ತಪಡಿಸಲಾಗಿದೆ). ಈ ಕೃತಿಗಳ ಉದ್ದೇಶವೂ ಶೈವಧರ್ಮದ ಸಿದ್ಧಾಂತದ ಕೆಲವು ಮೂಲಭೂತ ಪರಿಕಲ್ಪನೆಗಳನ್ನು ವಿವರಿಸುವುದು ಮತ್ತು ವಿಸ್ತರಿಸುವುದು ಆಗಿರುತ್ತದೆ.

ಶಿವಜ್ಞಾನಬೋಧಮ್ ಸ್ವರೂಪ ಲಕ್ಷಣದ ವಿಷಯದಲ್ಲಿ ವಿವಾದ ಸೇರಿಕೊಂಡಿರುವುದು (ಮೂಲ ಕೃತಿಯೋ ಅಥವಾ ಬೇರೆ ಮೂಲಗಳು ಅದಕ್ಕೆ ಆಧಾರವನ್ನು ಒದಗಿಸಿರುವವೋ ಎಂಬ ವಿವಾದ)- ದುರ್ದೈವದ ಸಂಗತಿ. **ಶಿವಜ್ಞಾನಬೋಧಮ್** ಪಠ್ಯ ರೌರವಾಗಮದಲ್ಲಿಯ **ಪಾಶವಿಮೋಚಪಟಲಮ್**‌ದೊಳಗಿನ ಸೂತ್ರಗಳನ್ನು ತಮಿಳಿನಲ್ಲಿ ಅಳವಡಿಸಿಕೊಂಡಿದೆ ಇಲ್ಲವೆ ಅನುವಾದಿಸಿಕೊಂಡಿದೆ ಎಂದು ತಿರುವಾವಡುತುರೈ ಅಧೀನಮ್ ಮಠದ ಸ್ವಾಮಿಗಳು ಸಾಧಿಸುವುದನ್ನು ಮಠದ ಅಧಿಕೃತ ಪ್ರಕಟಣೆಗಳಲ್ಲಿ ಕಾಣಬಹುದು (ಉದಾ. ಅನನ್, ೧೯೬೨). ಸ್ವಾಮಿ ವೇದಾಚಲಮ್, ಸುಬ್ರಹ್ಮಣ್ಯ ಪಿಳ್ಳೈ, ಬಾಲುಸುಬ್ರಹ್ಮಣ್ಯ ಮುದಲಿಯಾರ್ ಮೊದಲಾದವರು ಅದು ಮೂಲಕೃತಿ ಆಗಿದೆಯೆಂದು ಮುಚ್ಚುಮರೆಯಿಲ್ಲದೆ ಹೇಳುತ್ತಾರೆ (ಆಧಾರವಾಗಿ ಕೊಟ್ಟ ಪೂರ್ಣ ಪಂಕ್ತಿಗಳಿಗಾಗಿ ರಾಜನಿಕ್ಕಮ್, ೧೯೫೮ನ್ನು ನೋಡಿ). ಎರಡನೆಯ ವಾದವನ್ನು ಪ್ರತಿನಿಧಿಸುವ ಪೂರ್ಣಲಿಂಗಮ್ ಪಿಳ್ಳೈ (೧೯೨೭) ಹೀಗೆ ಹೇಳುತ್ತಾನೆ:" ಅದರ ವಿಚಾರಗಳು ಪ್ರಾಚೀನವಾಗಿದ್ದವು. ಆದರೆ ಅವುಗಳ ಭಾಷೆ ಹೊಸದಿದ್ದು ಹೆಚ್ಚಾಗಿ ಆರ್ಯಸಂಸ್ಕೃತಿಯದಾಗಿದೆ. ಈ ಸಂಗತಿಯು ಅನೇಕ ವಿದ್ವಾಂಸರು ಮೆಯ್ಕಂಡರ್‌ನ

ಗ್ರಂಥವು ಕೇವಲ **ರೌರವಾಗಮದ** 'ಪವ ವಿಮೋಚನಮ್'ದಲ್ಲಿಯ ೧೨ ಶ್ಲೋಕಗಳ ಅನುವಾದವಾಗಿದೆಯೆಂದು ಕಲ್ಪಿಸುವಂತೆ ಮಾಡಿದೆ. ಆ ಎರಡೂ ಗ್ರಂಥಗಳನ್ನು ನಿಷ್ಪಕ್ಷಪಾತ ದೃಷ್ಟಿಯಿಂದ ತುಲನೆಮಾಡಿದರೆ ಸತ್ಯದ ಮನವರಿಕೆಯಾಗುವುದು. ಸತ್ಯಾಂಶವೇನೆಂದರೆ, ಮೆಯ್ಕಂಡರ್‌ನ ಗ್ರಂಥವನ್ನು ಸಂಸ್ಕೃತ ಭಾಷೆಗೆ ತರ್ಜುಮೆ ಮಾಡಿದವನು ಅದನ್ನು ಅರ್ಥಮರ್ಥ ತಿಳಿದುಕೊಂಡಿರುವನು. ಮತ್ತು ಕೆಲವು ಬೋಧನೆಗಳನ್ನು ಅಸ್ಪಷ್ಟವಾಗಿ ಅನುವಾದಿಸಿರುವನು." ಸದಾಶಿವ ಪಂಡರತ್ತರ್ (೧೯೬೩) ಇದೇ ವಿಚಾರವನ್ನು ಹೆಚ್ಚು ಭಾವುಕವಾಗಿ ಪ್ರತಿಧ್ವನಿಸಿದ್ದಾನೆ.

ತಮಿಳು ಭಾಷೆಯಲ್ಲಿ ಸಿದ್ಧಾಂತ ಗ್ರಂಥ ಬರೆದವರಲ್ಲಿ ಮೆಯ್ಕಂಡನೇ ಮೊದಲಿಗನಲ್ಲ ಎಂಬುದನ್ನು ಮರೆಯಬಾರದು. ಶೈವಸಿದ್ಧಾಂತದ ಕೆಲವು ನೋಟಗಳನ್ನು ಕುರಿತು ಬರೆಯಲಾದ **ತಿರುವುಂದಿಯರ್** ಮತ್ತು **ತಿರುಕ್ಕಲಿರ್ರುಪ್ಪಡಿಯಾರ್** ಗ್ರಂಥಗಳು ಆಗಲೇ ೧೨ನೇ ಶತಮಾನದಲ್ಲಿ ಚಲಾವಣೆಯಲ್ಲಿದ್ದವು. ಶೈವ ಧರ್ಮದ ಸಿದ್ಧಾಂತವನ್ನು ವಿಶದವಾಗಿ ವಿವರಿಸುವ ಅನೇಕ ಸಂಸ್ಕೃತ ಗ್ರಂಥಗಳು ಗೋಳಕಿ ಆಚಾರ್ಯರ ಮುಖಾಂತರ ತಮಿಳು ನಾಡಿನ ಧಾರ್ಮಿಕ ಮತ್ತು ಆಧ್ಯಾತ್ಮಿಕ ಪರಿಸರವನ್ನು ಈ ಹೊತ್ತಿಗೆ ಆಳವಾಗಿ ಭೇದಿಸಿದ್ದನ್ನು ಈ ಮೊದಲೇ ನೋಡಿದ್ದೇವೆ. ಸ್ವತಃ ಮೆಯ್ಕಂಡನು ತಿರುವಣ್ಣಾಮಲೈಯಲ್ಲಿಯ ಗೋಳಕಿಮಠದ ಅಧಿಪತಿಯಾಗಿದ್ದುದೂ ನಿಜ ಸಂಗತಿಯಾಗಿದೆ (ದುರಸ್ವಾಮಿ ಪಿಳ್ಳೈ, ೧೯೬೮). ವಿವಾದವನ್ನು ಈ ಹಿನ್ನೆಲೆಯಲ್ಲಿ ನೋಡಿದಾಗ **ಶಿವಜ್ಞಾನಬೋಧಮ್** ಗ್ರಂಥವು ಶೈವ ಧರ್ಮದ ಮತ್ತಮಯೂರ ಗೋಳಕಿ ಪಂಥದ ಸಂಸ್ಕೃತ ಪಠ್ಯಗಳಲ್ಲಿದ್ದ ತತ್ತ್ವಗಳ ತಮಿಳ ತರ್ಜುಮೆಯಾಗಿದೆ ಎಂಬ ನಿರ್ಣಯ ಸಹಜ ಅಷ್ಟೇ ಅಲ್ಲ ಅನಿವಾರ್ಯವೂ ಆಗಿರುತ್ತದೆ. ಮೇಯ್ಕಂಡನು ಮೂಲ ವಿಷಯಗಳನ್ನು **ರೌರವಾಗಮದಿಂದ** ಅಥವಾ ಭೋಜರಾಜ ಅಥವಾ ಸದ್ಯೋಜಾತ ಇವರ ಕೃತಿಗಳಿಂದ ಅಥವಾ ಗೋಳಕಿಪಂಥ ಉಪಯೋಗಿಸುತ್ತಿದ್ದ ಬಹುಸಂಖ್ಯಾತ ಸಂಸ್ಕೃತಗ್ರಂಥಗಳಿಂದ ಪಡೆದನೊ ಇಲ್ಲವೊ ಎಂಬುದು ಅಪ್ರಸ್ತುತ. **ಶಿವಜ್ಞಾನಬೋಧಮ್** ಗೋಳಕಿಪಂಥವು ಅನುಸರಿಸುತ್ತಿದ್ದ ಶೈವಸಿದ್ಧಾಂತದ ತತ್ತ್ವಗಳನ್ನೊಳಗೊಂಡ ಮೂಲಪಠ್ಯವಾಗಿದ್ದುದು ಸತ್ಯಸಂಗತಿ. ಗೋಳಕಿಧರ್ಮವನ್ನು ಪ್ರತಿಪಾದಿಸುವ ಸಂಸ್ಕೃತಪಠ್ಯಗಳು ಮತ್ತು ಶೈವಸಿದ್ಧಾಂತದ ಸೂತ್ರಗಳನ್ನೊಳಗೊಂಡ ತಮಿಳುಪಠ್ಯ, ಎರಡೂ ಭಾಷೆಗಳಲ್ಲಿರುವ ಪಠ್ಯಗಳ ವಿಷಯಗಳು ಒಂದೇ ಆಗಿದ್ದು, ಒಂದರಿಂದ ಮತ್ತೊಂದು ಭಿನ್ನ ಅಲ್ಲ ಎಂದು ನಿರ್ಣಯಿಸಬೇಕಾಗುತ್ತದೆ.

ಏನೇ ಆಗಲಿ, ತಮಿಳುನಾಡಿನಲ್ಲಿ ಶೈವಧರ್ಮವನ್ನು ಪಸರಿಸುವಲ್ಲಿ ಮೆಯ್ಕಂಡನು ಆಡಿದ ಪಾತ್ರ ವಿವಾದಾತೀತವಾದದ್ದು. ತನ್ನ ಕಾಲದಲ್ಲಿ ಪ್ರಚಾರದಲ್ಲಿದ್ದ ಶೈವಸಿದ್ಧಾಂತದ ಮೂಲಭೂತ ತತ್ತ್ವಗಳನ್ನು ಈ ಭಾಗದ ಜನರ ಭಾಷೆಯಲ್ಲಿ ಅವನು ಮಾಡಿದ ಅನುವಾದ ಆ ಪಂಥದ ಪ್ರಸಾರಗತಿಯನ್ನು ಹೆಚ್ಚಿಸಿತಲ್ಲದೆ, ಮುಂದಿನ ಶತಮಾನಗಳಲ್ಲಿ ತಮಿಳು ಭಾಷೆಯಲ್ಲಿ ಧಾರ್ಮಿಕ ಮತ್ತು ತತ್ತ್ವಶಾಸ್ತ್ರದ ಗ್ರಂಥಗಳು ಅಧಿಕ ಸಂಖ್ಯೆಯಲ್ಲಿ ರಚನೆ ಆಗುವುದಕ್ಕೆ ಚಾಲನೆ ನೀಡಿತು. ೯ನೇ ಮತ್ತು ೧೪ನೇ ಶತಮಾನಗಳ ನಡುವಿನ ಅವಧಿಯಲ್ಲಿ

ಭಾರತದ ವಿವಿಧ ಭಾಗಕ್ಕೆ ಸೇರಿದ ಅನೇಕ ಲೇಖಕರು ಸಾಮಾನ್ಯವಾಗಿ ತಮ್ಮ ಕಾಲದ ಶೈವ ಧರ್ಮದ (sensu latu) ನಾಲ್ಕು ಪ್ರಮುಖ ಪಂಥಗಳನ್ನು ಗುರುತಿಸುತ್ತಾರೆ. ೯ನೇ ಶತಮಾನದ ವಾಚಸ್ಪತಿ ಶೈವ (sensu strictu) ಪಾಶುಪತ, ಕಾಪಾಲಿಕ ಮತ್ತು ಕಾರುಣಿಕ ಸಿದ್ಧಾಂತಗಳ ಬಗೆಗೆ ಹೇಳುತ್ತಾನೆ. ಅವನ ನಂತರದ ಕಾಲದಲ್ಲಿ ಬರುವ ಲೇಖಕರು ಮೊದಲಿನ ಎರಡು ಪಂಥಗಳನ್ನು ಉಲ್ಲೇಖಿಸುತ್ತಾರೆ. ಆದರೆ ಮುಂದಿನ ಎರಡರ ಬದಲು ಕಾಳಾಮುಖ, ಭೈರವ, ಮಹಾವ್ರತಧರ, ಸೋಮಸಿದ್ಧಾಂತ ಮುಂತಾದವುಗಳ ಬಗೆಗೆ ಹೇಳುತ್ತಾರೆ (ವಿವರಣೆಗಾಗಿ ಹಂದಿಕ್ವಿ ೧೯೪೯, ಚಿದಾನಂದಮೂರ್ತಿ ೧೯೬೬, ಸಿನ್ಹ ೧೯೭೦ನೋಡಿ). ಈ ಲೇಖಕರು ಶೈವ ಮತ್ತು ಪಾಶುಪತ ಪಂಥಗಳ ಬಗೆಗೆ ಒಂದೇ ರೀತಿ ಹೇಳುವುದರಿಂದ ೯ನೇ ಶತಮಾನದಿಂದ ಮುಂದಕ್ಕೆ ಆಚರಣೆಯ ಮತ್ತು ತಾತ್ವಿಕ ನೆಲೆಗಳಲ್ಲಿ ಅವುಗಳ ಸ್ವರೂಪ ಹೇಗಿದ್ದಿತೆಂಬುದು ಸ್ಪಷ್ಟವಾಗುತ್ತದೆ.

ಮತ್ತಮಯೂರ-ಆಮರ್ದಕ-ಗೋಳಕಿ ಪಂಥಗಳ ಅನುಯಾಯಿಗಳು ಅನುಸರಿಸುತ್ತಿದ್ದ ಶೈವದರ್ಶನ ಪ್ರತಿಪಾದಿಸಿದ ಸಿದ್ಧಾಂತ ದ್ವೈತ ಶೈವದ್ದಾಗಿದ್ದು, ಅದನ್ನು ಕಾಶ್ಮೀರದ ಅದ್ವೈತ ಶೈವಧರ್ಮ (ಪ್ರತ್ಯಭಿಜ್ಞಾ)ದಿಂದ ಬೇರ್ಪಡಿಸಲಾಗಿದೆ. ಪಾಶುಪತರಿಂದ ಭಿನ್ನವಾಗಿ, ಶೈವ ಸಿದ್ಧಾಂತಗಳು (ಸೈದ್ಧಾಂತಿಕ ಶೈವ ಅಥವಾ ಶೈವ ಸಿದ್ಧಾಂತ) ದೇವರನ್ನು ಪ್ರಪಂಚದ ಕಾರ್ಯಕಾರಿ ಕಾರಣವೆಂದು ತಿಳಿಯುತ್ತಾರೆ. ಅವನ ಜಾಗ್ರತಶಕ್ತಿ ಸಾಧಕ ಕಾರಣವಾಗಿದ್ದಾಳೆ, ಮತ್ತು ಅಜಾಗ್ರತ ಶಕ್ತಿಯಾದ ಮಾಯೆ ಭೌತಿಕ ಕಾರಣವಾಗಿದ್ದಾಳೆ. ವೈಯಕ್ತಿಕ ಆತ್ಮಗಳು ಶಾಶ್ವತವಿದ್ದು, ಮೋಕ್ಷಸ್ಥಿತಿಯಲ್ಲಿ ತಮ್ಮ ವೈಶಿಷ್ಟ್ಯವನ್ನು ಕಳೆದುಕೊಳ್ಳದೆ, ಶಿವನೊಂದಿಗೆ ಒಂದಾಗುತ್ತವೆ. ಆಚರಣೆಯ ಹಂತಗಳಲ್ಲಿ ಶೈವರು ಮತ್ತು ಪಾಶುಪತರ ನಡುವೆ ಕೆಲವು ಸಾಮಾನ್ಯ ರೂಢಿಗಳಿದ್ದಂತೆ ತೋರುತ್ತದೆ. ಅವುಗಳ ಜೊತೆಗೆ ಅವು ತಮ್ಮವೇ ಆದ ಕೆಲವು ವಿಶಿಷ್ಟ ರೂಢಿಗಳನ್ನು ಉಳಿಸಿಕೊಂಡಿದ್ದವು. ಎರಡೂ ಪಂಥಗಳ ಅನುಯಾಯಿಗಳು ದೇವಾಲಯಗಳಲ್ಲಿ ಸ್ಥಾಪಿಸಲಾದ ಶಿವಲಿಂಗವನ್ನು ಆಗಮ ವಿಧಿಸಿದ ಕಟ್ಟುನಿಟ್ಟಿನ ವಿಧಾನದ ಪ್ರಕಾರ ಪೂಜಿಸುವುದನ್ನು ಒಪ್ಪಿಕೊಂಡವು. ಮತ್ತೆ ಎರಡರ ಪೂಜಾವಿಧಾನದಲ್ಲಿ ವೈದಿಕ, ತಾಂತ್ರಿಕ ಮತ್ತು ಶಾಕ್ತಿಕ ಅಂಶಗಳು ಬೇರೆ ಬೇರೆ ಪ್ರಮಾಣದಲ್ಲಿ ಸೇರಿದವು. ಪಾಶುಪತನು ತನ್ನ ದೇಹದ ತುಂಬ ವಿಭೂತಿ ಹಚ್ಚಬೇಕಿದ್ದರೆ, ಶೈವನು ತನ್ನ ಹಣೆಯ ಮೇಲಷ್ಟೇ ವಿಭೂತಿ ಹಚ್ಚಬೇಕು. ಪಾಶುಪತರು ಮತ್ತು ಶೈವರ ನಡುವಿನ ಸಾಮ್ಯ ವೈಷಮ್ಯಗಳು ಅವು ಬಹು ಹಿಂದಕ್ಕೆ ಒಂದೇ ಮೂಲದಿಂದ ಹುಟ್ಟಿರುವುದನ್ನೂ, ತಾತ್ವಿಕ ಪರಿಕಲ್ಪನೆಗಳಲ್ಲಿ ಹೊಸ ಹೊಸ ಅಂಶಗಳು ಒಳ ಸೇರಿದುದರ ಹಾಗೂ ಅನ್ಯಸಿದ್ಧಾಂತಗಳ ಹೊರಗಿನ ಪ್ರಭಾವಕ್ಕೆ ಒಳಗಾದುದರ ಕಾರಣದಿಂದಾಗಿ ನಂತರ ಅವು ಬೇರ್ಪಟ್ಟುದನ್ನೂ ಸೂಚಿಸುತ್ತವೆ (ದಿವಾನಜಿ, ೧೯೫೫).

# ತಮಿಳುನಾಡಿನಲ್ಲಿ ಶೈವಪಂಥದ ಚರಿತ್ರೆಯ ಪುನರ್‌ರಚನೆ

**ಹಿನ್ನೆಲೆ:**

ತೊಂಡೈಮಂಡಲಮ್ ಆಳುತ್ತಿದ್ದ ಪಲ್ಲವರು ೬ನೇ ಶತಮಾನದಿಂದ ಒಂದು ಪ್ರಕಾರದ ಶೈವಧರ್ಮವನ್ನು ಪ್ರೋತ್ಸಾಹಿಸಿದರು. ಅದರ ಕುರುಹುಗಳಾದ ದೇವಾಲಯಗಳು ಶತಮಾನಗಳುದ್ದಕ್ಕೂ ಬದುಕಿ ಉಳಿದಿರುತ್ತವೆ. ಈ ವಿಷಯ ಕುರಿತು ಅನೇಕ ಲೇಖಕರು ಬರೆದಿದ್ದಾರೆ. ಆದರೆ ಅವರ ಹೇಳಿಕೆಗಳು ಮತ್ತು ನಿರ್ಣಯಗಳು ಆನುಷಂಗಿಕ ಸ್ವರೂಪದವಾಗಿರುತ್ತವೆ. ಈ ಬರಹಗಳನ್ನು ಓದಿದವನಿಗೆ ಪ್ರಸ್ತುತ ಶೈವಧರ್ಮವು ಸಾಮಾನ್ಯ ಸ್ವರೂಪದ್ದಾಗಿದ್ದು, ಅದರ ಲಕ್ಷಣಗಳನ್ನು ಸದ್ಯಕ್ಕೆ ಹೆಚ್ಚು ನಿರ್ದಿಷ್ಟಗೊಳಿಸಲಿಕ್ಕಾಗದು ಎಂದು ಅನಿಸದಿರದು. ಆದಾಗ್ಯೂ, "ಮತ್ತವಿಲಾಸ ಪ್ರಹಸನ" ಎಂಬ ಮೋಜಿನ ನಾಟಕವು ಪಲ್ಲವ ಅರಸು ಮೊದಲನೆಯ ಮಹೇಂದ್ರನದೆಂದು ತಿಳಿದರೆ (ಕ್ರಿ.ಶ. ೬೧೦-೩೦), ಶೈವಧರ್ಮದ ಪಾಶುಪತ ಮತ್ತು ಕಾಪಾಲಿಕ ಪಂಥಗಳು ಆಗಲೇ ರೂಢಿಯಲ್ಲಿದ್ದವೆಂದು ಅಭಿಪ್ರಾಯಪಡಬೇಕಾಗುತ್ತದೆ. ಆದರೂ ಶೈವಧರ್ಮ ಅರಸರ ವೈಯಕ್ತಿಕ ಧರ್ಮವಾಗಿದ್ದಿತೋ ಅಥವಾ ಆ ಪ್ರದೇಶದಲ್ಲಿ ಜನಪ್ರಿಯ ಧರ್ಮವಾಗಿದ್ದಿತೋ ಎಂಬುದು ಪ್ರಶ್ನೆಯಾಗಿಯೇ ಉಳಿದಿರುತ್ತದೆ. ಸ್ವಲ್ಪ ಅದೇ ತರಹದ ಸಂದಿಗ್ಧ ಪರಿಸ್ಥಿತಿ ಚೋಳ ಅರಸು ಮೊದಲನೆಯ ರಾಜರಾಜನ ವರೆಗೂ ಮುಂದುವರೆಯಿತು. ಆ ಹೊತ್ತಿಗೆ ತಮಿಳುನಾಡಿನಲ್ಲಿ ಹೊಸದಾಗಿ ಶಿವದೇವಾಲಯಗಳು ನಿರ್ಮಾಣವಾದವು. ಮತ್ತು ಮೊದಲನೆಯ ಮತ್ತು ಎರಡನೆಯ ಆದಿತ್ಯ ಅರಸರ ಅವಧಿಯಲ್ಲಿ ನಾಶವಾಗುವಂಥ ವಸ್ತುಗಳಿಂದ ನಿರ್ಮಿಸಿದ ಶಿವದೇವಾಲಯಗಳು ಕಲ್ಲಿನಿಂದ ಕಟ್ಟಲ್ಪಟ್ಟವು. (ಬಾಲಸುಬ್ರಹ್ಮಣ್ಯಮ್, ೧೯೬೬). ಈ ಅರಸರ ಶಾಸನಗಳಿಂದ ಆಗಿನ ಕಾಲದ ಶೈವಧರ್ಮದ ಸ್ವರೂಪವನ್ನು ವಿವರಿಸಲು ನೆರವಾಗುವ ಸೂಕ್ತ ಸಂಗತಿಗಳು ಸಿಗುವುದು ಬಹು ಅಲ್ಪ. ಏನೇ ಆಗಲಿ, ಅವು ಒಂದು ಬಗೆಯ ಮಾಹೇಶ್ವರ ಪಂಥ—ಬಹುಶಃ ಪಾಶುಪತ ಪ್ರಕಾರ ಆಗಿರಲು ಸಾಧ್ಯ—ಹೆಚ್ಚು ಪ್ರಚಾರದಲ್ಲಿದ್ದುದನ್ನು ಸೂಚಿಸುತ್ತವೆ. ದೇವಾಲಯದಲ್ಲಿಯ ಶಿವಲಿಂಗವನ್ನು ಪೂಜಿಸುವುದು, ದೇವಾಲಯದ ಕ್ರಿಯಾಚರಣೆಗಳಲ್ಲಿ ಪಾಲ್ಗೊಳ್ಳುವುದು ಮತ್ತು ದೇವರ ಸ್ತೋತ್ರಗಳನ್ನು ಹಾಡುವುದು ಆಗಿನ ಕಾಲದ ಧಾರ್ಮಿಕ ಜೀವನಕ್ರಮವಾಗಿದ್ದಂತೆ ತೋರುತ್ತದೆ. ಮೊದಲಿನ ಮೂವರು ನಾಯನ್ಮಾರರು ಈ ಅವಧಿಯಲ್ಲಿ ಇದ್ದಿರುವ ಸಾಧ್ಯತೆ ಹೆಚ್ಚು.*

**ಉಗಮ ಪ್ರದೇಶಗಳು:**

ಮೊದಲನೆಯ ಪರಾಂತಕನ ಕಾಲಾವಧಿಯಲ್ಲಿ ಚೋಳ ರಾಜ್ಯವು ಉತ್ತರಕ್ಕೆ ನೆಲ್ಲೂರ್ ವರೆಗೆ ವಿಸ್ತಾರವಾಯಿತು. ಮೊದಲನೆಯ ರಾಜರಾಜನು ಇನ್ನೂ ಉತ್ತರದ ಪ್ರದೇಶ (ವೆಂಗಿ),

---

* ಈ ವಿಷಯವನ್ನು ಪ್ರತ್ಯೇಕ ಅಭ್ಯಸಿಸಲಾಗುವುದು.

ಪೂರ್ವಕರಾವಳಿಯಿಂದ ಬಹಳ ಒಳಗಿನ ಪ್ರದೇಶ, ಪಶ್ಚಿಮಕ್ಕೆ ಚಾಲುಕ್ಯ ರಾಜ್ಯದ ವರೆಗಿನ ಪ್ರದೇಶಗಳಲ್ಲಿ ತನ್ನ ಅಧಿಪತ್ಯವನ್ನು ಸ್ಥಾಪಿಸಿದನು. ಅವನ ಮಗನಾದ ಮೊದಲನೆಯ ರಾಜೇಂದ್ರನ ದಿಗ್ವಿಜಯ ಇನ್ನೂ ಉತ್ತರಕ್ಕೆ ಆಧುನಿಕ ಬಂಗಾಲ ಪ್ರದೇಶಗಳ ವರೆಗೆ ಚಾಚಿತು. ಈ ದಂಡಯಾತ್ರೆ ಮತ್ತು ದಿಗ್ವಿಜಯಗಳು ಮಧ್ಯಯುಗದಲ್ಲಿ ಉತ್ತರ ಮತ್ತು ದಕ್ಷಿಣ ಭಾರತ ನಡುವೆ ಮುಕ್ತ ಸಾಂಸ್ಕೃತಿಕ ಹೊಕ್ಕು ಬಳಕೆ ಮತ್ತು ಪರಸ್ಪರ ವಲಸೆಗಳನ್ನು ಸ್ಥಿರಪಡಿಸಿದವು. ಚೇದಿ ಪ್ರದೇಶದ ಅರಸರು ಮತ್ತಮಯೂರ ಪಂಥದ ಆಚಾರ್ಯರಿಗೆ ಆಶ್ರಯ ನೀಡುತ್ತಿದ್ದುದು ೯ನೇ ಶತಮಾನದ ಪೂರ್ವಾರ್ಧದಲ್ಲಿ. ಕಲಚೂರಿ ಅರಸುಮನೆತನದ ಮೊದಲನೆಯ ಯುವರಾಜನ ಅವಧಿಯಲ್ಲಿ ಡಹಳ ಮಂಡಲದಲ್ಲಿ ಗೋಳಕಿಮಠವು ಸ್ಥಾಪಿತವಾದುದು ತಿಳಿದು ಬರುತ್ತದೆ. ಶೈವಧರ್ಮ (sense strictu) ೮ನೇ ಶತಮಾನದಲ್ಲಿ ಕೂಡ ಈ ಡಹಳ ಮಂಡಳ ಭಾಗದಲ್ಲಿ ಪ್ರಭಾವೀ ಪಂಥವಾಗಿತ್ತೆಂಬುದು ವಿಶೇಷ ಗಮನಕ್ಕೆ ಬರುತ್ತದೆ. ಕಲಚೂರಿ ದಾಖಲೆಗಳಲ್ಲಿ ಉಲ್ಲೇಖಿಸಿದ ಆಚಾರ್ಯರ ವಂಶಪರಂಪರೆಗಳನ್ನು ಈ ಶತಮಾನದಷ್ಟು ಹಿಂದಕ್ಕೆ ಒಯ್ಯಲು ಸಾಧ್ಯವಿರುವ ಸಂಗತಿಯು ಅದನ್ನು ಪುಷ್ಟೀಕರಿಸುತ್ತದೆ. ಉತ್ತರಭಾರತದಲ್ಲಿ ದಕ್ಕಣ ಲಾಡಮ್ (ದಕ್ಷಿಣ ರಾಢಾ)ದ ವರೆಗೆ ಇವರು ನಡೆಯಿಸಿದ ಕಾಳಗಗಳ ಪ್ರದೇಶಗಳಲ್ಲಿ ಹೆಚ್ಚು ಪ್ರಚಾರದಲ್ಲಿದ್ದ ಶೈವಪಂಥದಿಂದ (ತಮ್ಮ ಪಿತೃಗಳ ಕಾಲದಿಂದಲೂ ಪಾಶುಪತರಾಗಿದ್ದ) ಮೊದಲನೆಯ ರಾಜರಾಜ ಮತ್ತು ಮೊದಲನೆಯ ರಾಜೇಂದ್ರರು ಹೆಚ್ಚು ಪ್ರಭಾವಿತರಾಗಿರಲು ಸಾಧ್ಯವಿದೆ. ಈ ಮೊದಲು ಹೇಳಿದಂತೆ, ಒಂದನೆಯ ರಾಜೇಂದ್ರನು ಗಂಗೆಯ ತಟಗಳಿಂದ ಶಿವಾಚಾರ್ಯರ ಕುಟುಂಬಗಳನ್ನು ಬರಮಾಡಿಕೊಂಡು, ಅವರು ಕಂಚಿ ಮತ್ತು ಚೋಳ ರಾಜ್ಯದಲ್ಲಿ ನೆಲೆಸುವಂತೆ ಮಾಡಿದನು. ಚೋಳ ಅರಸರು ಉತ್ತರದಲ್ಲಿ ವಿಜಯ ಸಾಧಿಸಿದ ಬಳಿಕ ತಮಿಳುನಾಡಿನಲ್ಲಿಯ ಗೋಳಕಿಪಂಥದ ಆಚಾರ್ಯರ ಹೆಸರುಗಳು ಕೇಳಬರಹತ್ತುತ್ತವೆ: ಈಶಾನ ಶಿವನು ಮೊದಲನೆಯ ರಾಜರಾಜನ ರಾಜಗುರುವಾಗಿದ್ದನು (SII, II, No. 9, 91) ಮತ್ತು ಸರ್ವಶಿವನು ಮೊದಲನೆಯ ರಾಜೇಂದ್ರನ ರಾಜಗುರುವಾಗಿದ್ದನು (SII, II, No. 20). **ಸಿದ್ಧಾಂತಸಾರ, ಈಶಾನಗುರುದೇವ ಪದ್ಧತಿ**, ಮುಂತಾದ ಪಠ್ಯಗಳು, ಸ್ಪಷ್ಟವಾಗಿ ಚೋಳನೆಲದಲ್ಲಿ ಈ ಅರಸರ ಆಳಿಕೆಯಲ್ಲಿ ರಚಿತವಾದವು. ಹೀಗೆ ೯ನೇ ಮತ್ತು ೧೦ನೇ ಶತಮಾನಗಳಿಂದ ತಮಿಳುನಾಡಿನಲ್ಲಿ ಶೈವಧರ್ಮದ ಗೋಳಕಿಪಂಥ ಪ್ರಾರಂಭವಾಯಿತು.

**ಪ್ರಾರಂಭದ ಒಳನುಗ್ಗುವಿಕೆ ಮತ್ತು ಪರಸ್ಪರ ಸ್ಪಂದಿಸುವಿಕೆ:**

ತಮಿಳುನಾಡಿನ ಗೋಳಕಿಶೈವಧರ್ಮದ ಇತಿಹಾಸದಲ್ಲಿ ತಂಜಾವೂರಿನ ರಾಜರಾಜೇಶ್ವರ ಮತ್ತು ಗಂಗೈಕೊಂಡ ಚೋಳಪುರಮ್‌ನ ಗಂಗೈಕೊಂಡ ಚೋಳೀಶ್ವರಮ್ ದೇವಾಲಯಗಳ ನಿರ್ಮಾಣವು ಶ್ರೇಷ್ಠತೆಯ ಕುರುಹಾಗಿವೆ. ಈ ದೇವಾಲಯಗಳ ನಿರ್ಮಾಣಕ್ಕೆ ಕಾರಣವಾದ ಚೋಳ ಅರಸರು ಬಹು ಸಂಖ್ಯೆಯ ಆಚಾರ್ಯರು ಮತ್ತು ಅವರ ಶಿಷ್ಯರನ್ನು ಆರ್ಯದೇಶ, ಮಧ್ಯದೇಶ ಮತ್ತು ಗೌಡದೇಶಗಳಿಂದ ಕರೆಯಿಸಿಕೊಂಡರೆಂದು ಹೇಳಲಾಗುತ್ತಿದೆ (SII, II,

No. 20). ಈ ಆಚಾರ್ಯರೆಲ್ಲರಿಗೆ ವಸತಿ ಸೌಕರ್ಯ ಒದಗಿಸಲು ಅನೇಕ ಸನ್ಯಾಸಿಮಠಗಳು ಅಸ್ತಿತ್ವದಲ್ಲಿ ಬಂದವು. ಅಂಥ ಎರಡು ಸಂಸ್ಥೆಗಳು ತಿರುವಾವಡುತುರೈಯಲ್ಲಿ ನಿರ್ಮಿಸಲ್ಪಟ್ಟವು. ಅದರಿಂದ ಸೂಚಿತವಾಗುವ ಸಂಗತಿಯೆಂದರೆ, ತಮಿಳುನಾಡಿನಲ್ಲಿ ಪ್ರಾರಂಭದ ಹಂತದಿಂದಲೂ ತಿರುವಾವಡುತುರೈ ಗ್ರಾಮವು ಶೈವಪಂಥದ ಪ್ರಮುಖ ಕೇಂದ್ರವಾಗಿದ್ದಿತು. ಇವುಗಳಲ್ಲಿ ಒಂದು, ಸರ್ವದೇವನ್‌ಮಠಕ್ಕೆ ರಾಜಗುರು ಸರ್ವಶಿವನ ಹೆಸರಿಡಲಾಯಿತು. (೯೨೫, ೧೦೩ ಕ್ರಿ.ಶ. ೧೦೪೦) ಈ ಕಾಲವಧಿಯಲ್ಲಿ ಸ್ಥಾಪಿಸಲಾದ ಉಳಿದ ಮಠಗಳು ಶಿವಪುರಂ (ಕುಂಭಕೋಣಂ ತಾಲೂಕು), ತಿರುಕ್ಕಡೈಯುರ್ (ಮಯೂರಂ ತಾಲೂಕು) ಮತ್ತು ಬ್ರಹ್ಮದೇಶಮ್ (ವಿಲ್ಲುಪುರಂ ತಾಲೂಕು) ಸ್ಥಳಗಳಲ್ಲಿ ಸ್ಥಾಪಿತವಾದದ್ದು ಕಂಡುಬರುತ್ತದೆ (ಅನುಬಂಧ ನೋಡಿ).

ತಮಿಳುನಾಡಿನಲ್ಲಿ ಮೊದಲನೆಯ ರಾಜರಾಜನಿಗಿಂತಲೂ ಮೊದಲು ಆಚರಣೆಯಲ್ಲಿದ್ದ ಪ್ರಧಾನ ಶೈವಪಂಥವು ಹೊಸದಾಗಿ ಪ್ರಾರಂಭಿಸಿದ ಶೈವಪಂಥಕ್ಕಿಂತ ಧಾರ್ಮಿಕ ಆಚರಣೆಗಳಲ್ಲಿ ಬಹಳಷ್ಟು ಭಿನ್ನವಾಗಿರಲಿಲ್ಲವೆಂದು ಹೇಳಬೇಕಾಗುತ್ತದೆ. ಎರಡೂ ಒಬ್ಬ ಪರಮೋಚ್ಚದೇವ (ಪರಮಾತ್ಮ)ನ ಅಸ್ತಿತ್ವದಲ್ಲಿ ನಂಬುಗೆ ಇಟ್ಟಿದ್ದವು. ಆ ದೇವ ಶಿವ ಆಗಿದ್ದ. ಎರಡೂ ಪಂಥಗಳು ದೇವಾಲಯದಲ್ಲಿ ಸ್ಥಾಪಿತವಾದ ಶಿವನನ್ನು ಸಾಕಾರ ನಿರಾಕಾರ ರೂಪದಲ್ಲಿ ಪೂಜಿಸುತ್ತಿದ್ದವು. ಎರಡೂ ಪ್ರಾರ್ಥನೆಯ ಪರಿಣಾಮದಲ್ಲಿ ಮತ್ತು ತುಸುಮಟ್ಟಿಗೆ ಯೋಗಾಭ್ಯಾಸದಲ್ಲಿ ನಂಬುಗೆ ಇಟ್ಟಿದ್ದವು, ಎರಡೂ ವೇದಗಳ ಪ್ರಭುತ್ವವನ್ನು ಗುರುತಿಸಿದ್ದವು, ಆದರೆ ಅದು ಬೇರೆ ಬೇರೆ ಪ್ರಮಾಣದಲ್ಲಿದ್ದಿತು. ಎರಡೂ ಕ್ರಿಯಾ ಮತ್ತು ಚರ್ಯಾ ಪಾದಗಳ ಆಚರಣೆಯ ವಿಷಯದಲ್ಲಿ ಆಗಮ ವಿಧಿಸಿದ ಕಟ್ಟಳೆಗಳನ್ನು ಪಾಲಿಸುತ್ತಿದ್ದವು. ಹಳೆಯಪಂಥ ಪಾಶುಪತ ಸೂತ್ರಗಳನ್ನು ಮತ್ತು ಅಲ್ಲಿರುವ ನೀತಿ ಸಂಹಿತೆಯನ್ನು ಆಯ್ದುಕೊಂಡರೆ, ಹೊಸ ಪಂಥ ಹೆಚ್ಚಾಗಿ ಶೈವಾಗಮವನ್ನು ಅವಲಂಬಿಸಿತು. ಒಟ್ಟಿಗೆ, ಅವೆರಡರ ಧಾರ್ಮಿಕ ಆಚರಣೆಗಳ ಮಧ್ಯೆ ಅಲ್ಪಸ್ವಲ್ಪ ಭಿನ್ನತೆಗಳಿದ್ದು, ಸೈದ್ಧಾಂತಿಕ ಪರಿಕಲ್ಪನೆಗಳ ಮಧ್ಯೆ, ಹಿಂದಿನ ಪುಟದಲ್ಲಿ ಹೇಳಿದಂತೆ, ಗಮನೀಯ ಭಿನ್ನತೆಗಳಿದ್ದವು. ಕರ್ಮಕ್ರಿಯೆಗಳ ಆಚರಣೆಯಲ್ಲಿ ಅವೆರಡರಲ್ಲಿ ಬಹು ಕಡಿಮೆ ವ್ಯತ್ಯಾಸಗಳಿದ್ದುದರಿಂದ ಹೊಸಪಂಥಕ್ಕೆ ಹೆಚ್ಚಿನ ಪ್ರಮಾಣದ ವಿರೋಧ ಎದುರಿಸುವ ಪ್ರಸಂಗ ಉದ್ಭವಿಸಲಿಲ್ಲ. ಅದೂ ಅಲ್ಲದೆ, ಹಳೆಯ ಪಂಥ ಸ್ವಲ್ಪ ಹಳಸಲಾಗಿ, ೭ನೇ ಶತಮಾನದಿಂದೀಚೆ ಯಾಂತ್ರಿಕವಾಗಿದ್ದಿತು. ಆದ್ದರಿಂದ ಹೊಸ ಜೀವಶಕ್ತಿ ಹೊಂದಿದ ಹೊಸ ಪಂಥಕ್ಕೆ ವಿಕಾಸವಾಗಲು ಮುಕ್ತ ಮತ್ತು ಸಿದ್ಧ ಸ್ಥಳ ಸಿಕ್ಕಿತು.

ಹೊಸ ಪಂಥವನ್ನು ಹಳೆಯದರ ಮೇಲೆ ಹೇರಿದುದರ ಪರಿಣಾಮವಾಗಿ ಹಳೆ ಹೊಸ ಎರಡೂ ಪಂಥಗಳ ಸಿದ್ಧಾಂತಗಳ ನಡುವೆ ಸಮನ್ವಯ ಸಾಧಿಸಿದ ಅಂಶಗಳನ್ನೊಳಗೊಂಡ ಹೊಸ ಪಠ್ಯಗಳು "ಪದ್ಧತಿ"ಗಳ ರೂಪದಲ್ಲಿ ರಚನೆಯಾಗುವುದು ಪ್ರಾರಂಭವಾಯಿತು. "ಭೆದಘಟ್‌ದಲ್ಲಿರುವ ಚೌಂಸಥಜೋಗಿಯ ಗುಡಿಯಲ್ಲಿ ದೊರೆಯುವ ಸಾಕ್ಷಾಧಾರದಿಂದ ಸ್ಪಷ್ಟವಾಗುವಂತೆ ಗೋಳಕಿಪಂಥ ಶಕ್ತಿಪೂಜೆಯ ಪಂಥಕ್ಕೆ ಸಂಬಂಧಿಸಿ ಸ್ಥಾಪಿಸಲ್ಪಟ್ಟಿತು" ಎಂಬ ಹಿರಾಲಾಲ(೧೯೨೭)ನ ಅಭಿಪ್ರಾಯವನ್ನು ಒಪ್ಪಿದರೆ, ಶಕ್ತಿಪೂಜೆಯ ಪಂಥವು

ಗೋಳಕಿಸಿದ್ಧಾಂತದ ಭಾಗವಾಗಿತ್ತೆಂದು ಮತ್ತು ಅದು ಗೋಳಕಿಪಂಥದ ಜೊತೆಗೆ ತಮಿಳುನಾಡಿನಲ್ಲಿ ವಲಸೆ ಬಂದಿತೆಂದು ತಿಳಿಯುವುದು ತರ್ಕಸಮ್ಮತವಾಗುತ್ತದೆ. ಶಿವದೇವಾಲಯ ಸಂಕೀರ್ಣದಲ್ಲಿ ದೇವಿಗಾಗಿ ಪ್ರತ್ಯೇಕ ಆರಾಧನಾ ಮಂದಿರ ಕಟ್ಟುವುದು ೧೧ನೇ ಶತಮಾನದಿಂದೀಚೆಗಷ್ಟೇ ಪ್ರಾರಂಭವಾಗಿದ್ದುದರಲ್ಲಿ ಈ ರೀತಿಯ ಬೆಳವಣಿಗೆಯನ್ನು ಸ್ಪಷ್ಟವಾಗಿ ಕಾಣುತ್ತೇವೆ (ಶ್ರೀನಿವಾಸ, ೧೯೬೦). ಹಳೆಯ ಪಂಥದಲ್ಲಿ ಸೇರಿದ ಈ ಮುಖ್ಯ ಪ್ರಕ್ಷಿಪ್ತತೆಯ ಪರಿಣಾಮವಾಗಿ, ಸಮನ್ವಯೀಕರಿಸಿದ ಅಂಶಗಳನ್ನೊಳಗೊಂಡ ಆಗಮಮೂಲ ಆಚರಣೆಯ ಪಠ್ಯಗಳ ವಿವರಣೆ ಬರೆಯುವುದು ಅವಶ್ಯವಾಯಿತು.

ಗೋಳಕಿ ಆಚಾರ್ಯರು ಹುಟ್ಟು ಹಾಕಿದ ಹೊಸ ಚಳುವಳಿಯನ್ನು ತಮಿಳರು ಕೂಡಲೇ ಒಪ್ಪಿಕೊಂಡರು. ಸ್ವತಃ ಮೊದಲನೆಯ ರಾಜರಾಜನು ತನ್ನದೇಶದ ಜನರು ಹೊಸಪಂಥ ಸೇರಲು ಪ್ರೋತ್ಸಾಹಿಸಿದಂತೆ ತೋರುತ್ತದೆ. ಅವನ ಶಾಸನವೊಂದು ರಾಜರಾಜೇಶ್ವರಂ ಗುಡಿಯಲ್ಲಿ ತಿರುಪ್ಪಡಿಯಮ್‌ಗಳನ್ನು (ಪವಿತ್ರದಶಕಗಳನ್ನು) ಹಾಡಲು ನೇಮಿಸಲಾಗಿದ್ದ ೪೫ ಜನರ ಹೆಸರುಗಳನ್ನು ಉಲ್ಲೇಖಿಸುತ್ತದೆ. ಬೇರೆಡೆಯಲ್ಲಿ ಎತ್ತಿ ತೋರಿಸಿದಂತೆ (ಸ್ವಾಮಿ, ೧೯೭೧) ಇವುಗಳಲ್ಲಿ, ಬಹಳಷ್ಟು ಅಂಕಿತನಾಮಗಳು ಆಗಿನ ಕಾಲದಲ್ಲಿ ಚಲಾವಣೆಯಲ್ಲಿದ್ದ ವಿಶಿಷ್ಟ ಹೆಸರುಗಳಾಗಿದ್ದರೆ, ಅವರ ದೀಕ್ಷಾ ನಾಮಗಳು ಕೂಡ ಅಷ್ಟೇ ವೈಶಿಷ್ಟ್ಯಪೂರ್ಣವಾಗಿದ್ದು, ಅವು ಗೋಳಕಿ ಆಚಾರ್ಯರು ಆಯ್ದ ಹೆಸರುಗಳಾಗಿರುತ್ತವೆ, ಉದಾ: ಇರಾಮನ್-ಸಂಬಂಧಮ್ ಉರುಫ್ ಸತ್ಯಶಿವ, ಅಂಬಲವನ್ ಪತ್ತಾರ್ಕ್ ಉರುಫ್ ವಾಮಶಿವ, ಕಂಬನ್-ತಿರುನಾವುಕ್ಕರೈಯನ್ ಉರುಫ್ ಸದಾಕೂತ್ತನ್, ವೆಂಕಟನ್ ಉರುಫ್ ರುದ್ರಶಿವ, ಪಿಂಚನ್ ವೆಂಕಟನ್ ಉರುಫ್ ಅಘೋರಶಿವ ಮುಂತಾದವು. ಈ ಪಟ್ಟಿಯಲ್ಲಿ ಕಾಪಾಲಿ-ವಾಲಿ ಉರುಫ್ ಜ್ಞಾನಶಿವ ಎಂಬ ಹೆಸರಿನ ವ್ಯಕ್ತಿಯೂ ಸೇರಿದ್ದಾನೆ. ಇದು ಕಾಪಾಲಿಕರನ್ನು ಕೂಡ ಗೋಳಕಿ ಅನುಯಾಯಿಗಳಲ್ಲಿ ಸೇರಿಸಿದುದನ್ನು ಸೂಚಿಸುತ್ತದೆ. ಹೊಸದಾಗಿ ಮತಾಂತರ ಹೊಂದಿದವರು ಹೊಸಧರ್ಮವನ್ನು ಅತ್ಯಂತ ನಿಷ್ಠೆಯಿಂದ ಪಾಲಿಸಿದರು. ೧೦ನೇ ಮತ್ತು ೧೧ನೇ ಶತಮಾನಗಳ ಶೈಲಿಯಲ್ಲಿ ಬರೆಯಲಾದ ದಿನಾಂಕರಹಿತ ಶಾಸನವೊಂದು ಶಾತ್ತಕೊಟ್ಟಿಮಾದೇವನ್ ಉರುಫ್ ವಾಮಶಿವ ಎಂಬವನು ದಕ್ಷಿಣ ಆರ್ಕಾಟಜಿಲ್ಲೆಯ ತಿರುನಮನಲ್ಲೂರಲ್ಲಿಯ ಕಲ್ಲುಗುಡಿಯಲ್ಲಿ ಚಂಡೇಶ್ವರಮೂರ್ತಿಯನ್ನು ಸ್ಥಾಪಿಸಿದುದನ್ನು ಉಲ್ಲೇಖಿಸುತ್ತದೆ (೧೯೩೯/೪೦, ೨೪೧).

೧೨ನೇ ಶತಮಾನದ ಶಾಸನಗಳು ಗೋಲಕಿಧರ್ಮವು ಅದೆಷ್ಟು ತೀವ್ರಗತಿಯಲ್ಲಿ ಸ್ಥಾನಿಕ ಜನರನ್ನು ಆಕರ್ಷಿಸಿತೆಂಬುದನ್ನು ಹೇಳುತ್ತವೆ. ವಿಟಂಕನ್ ಉಯ್ಯವಂದನ್ ಉರುಫ್ ಗಣಶಿವನು ತಿರುವಾವಡುತುರೈಯಲ್ಲಿಯ ದೇವಾಲಯಕ್ಕೆ ಪ್ರತಿಬದ್ಧಗೊಳಿಸಿದ ಸನ್ಯಾಸಿಮಠದ ತಪಸ್ವಿಯಾಗಿದ್ದನು (೧೯೨೬, ೧೪೪, ಕ್ರಿ.ಶ. ೧೧೨೨). ಯಾರೊ ಒಬ್ಬ ತಿರುಮಳಿಗೆಪ್ಪಿಸ್ಚನ್‌ನನ್ನು ಮಠಪತಿ ಎಂದು ಬಣ್ಣಿಸಲಾಗಿದೆ. (೧೯೧೨, ೪೪೬, ಕ್ರಿ.ಶ.

೧೧೮೧)*. ಚೋಳಸಿಂಹಾಸನವೇರಿದ ಪೂರ್ವಜರ ಮಾದರಿಯನ್ನು ಅನುಸರಿಸಿ ವಿಕ್ರಾಂತನು (೧೧೧೮-೧೧೩೫) ಶ್ರೀಕಾಂತಶಂಭು (ಶ್ರೀಕಾಂತಶಿವ)ವನ್ನು ತನ್ನ ರಾಜಗುರುವನ್ನಾಗಿ ಸ್ವೀಕರಿಸಿದ್ದನು. ಈ ಮೊದಲೇ ಹೇಳಿದಂತೆ, ತಮಿಳುಭಾಷೆಯಲ್ಲಿ ರಚಿತವಾದ ಎರಡು ಸಿದ್ಧಾಂತಪತ್ರಗಳು ಈ ಶತಮಾನದಲ್ಲಿ ರಚಿತವಾದವೆಂಬ ಸಂಗತಿಯು, ತಮಿಳು ಜನರು ಹೊಸಧರ್ಮವನ್ನು ಕೂಡಲೇ ತಮ್ಮದಾಗಿಸಿಕೊಂಡರೆಂಬುದಕ್ಕೆ ಸ್ಪಷ್ಟ ಪ್ರಮಾಣವಾಗಿರುತ್ತದೆ.

**ಗೋಳಕಿವಂಶ ವೃದ್ಧಿ :**

ಗೋಳಕಿವಂಶದವರು ಆಂಧ್ರಪ್ರದೇಶ ಮತ್ತು ತಮಿಳುನಾಡುಗಳಿಗೆ ವಲಸೆಬರುವುದು ಒಂದೇ ಸವನೆ ನಡೆಯಿತೆಂದು ಸೂಚಿಸುವ ಮಾಹಿತಿ ಗಣನೀಯ ಪ್ರಮಾಣದಲ್ಲಿ ಲಭ್ಯವಿರುತ್ತದೆ. ಒಂದರ ಮೇಲೊಂದರಂತೆ ಒಳಸೇರುತ್ತಿದ್ದ ವಲಸೆ ಅಲೆಯು ಶೈವಧರ್ಮದ ಧಮನಿಗಳಲ್ಲಿ ಹೊಸರಕ್ತ ಸಂಚರಿಸುವಂತೆ ಮಾಡಿತು. ಪುನಃ ಪುನಃ ನಡೆದ ಈ ಚಳುವಳಿಗಳು ಹೊಸ ಪ್ರದೇಶಗಳಲ್ಲಿ ಹೊಸ ಧರ್ಮವು ಸ್ಥಿರಗೊಳ್ಳಲು ಸಹಾಯಮಾಡಿದುವಷ್ಟೇ ಅಲ್ಲ, ಹೊಸ ವಂಶಗಳಲ್ಲಿ ಹೊಸಧರ್ಮದ ಸ್ಥಾಪನೆಗೂ ಕಾರಣವಾದವು. ಆಂಧ್ರಪ್ರದೇಶ ಮತ್ತು ತಮಿಳುನಾಡುಗಳಲ್ಲಿಯ ಲಕ್ಷಾಧ್ಯಾಯಿ ವಂಶಗಳು ಬಹುಮಟ್ಟಿಗೆ ಒಂದನ್ನೊಂದು ಅವಲಂಬಿಸಿರುವುದಿಲ್ಲವೆಂದೂ ಮತ್ತು ಲಕ್ಷಾಧ್ಯಾಯಿ ವಂಶ ಆಂಧ್ರಪ್ರದೇಶದಲ್ಲಿ ತಡವಾಗಿ ಎಂದರೆ ಅದು ತಮಿಳುನಾಡು ಪ್ರವೇಶಿಸಿದ ಒಂದು ಶತಮಾನದ ನಂತರ ಆಂಧ್ರಪ್ರದೇಶ ಪ್ರವೇಶಿಸಿತೆಂದೂ ಹೇಳಬೇಕಾಗುತ್ತದೆ. (ಚಿತ್ರ ೧) ಎರಡೂ ಭಾಷೆಯ ಪ್ರದೇಶಗಳು ಹತ್ತಿರ ಹತ್ತಿರ ಇರುವುದರಿಂದ ಅವೆರಡರ ನಡುವೆ ಸೀಮಿತ ಪ್ರಮಾಣದ ಕೊಡುಕೊಳ್ಳುವಿಕೆ ನಡೆದಿರಬಹುದಾಗಿದೆ. ಆದರೆ ಅದಕ್ಕೆ ಯಾವ ಆಧಾರಗಳೂ ಸಿಗುವುದಿಲ್ಲ.

ಆಂಧ್ರಪ್ರದೇಶದಲ್ಲಿ ಆದಂತೆ, ತಮಿಳುನಾಡಿನಲ್ಲಿ ವಲಸೆ ಬಂದು ಸ್ಥಿರಗೊಂಡವುಗಳಲ್ಲಿ ಗೋಳಕಿಪಂಥದ ಲಕ್ಷಾಧ್ಯಾಯಿ(ಭಿಕ್ಷಾ)ವಂಶವೇ ಮೊಟ್ಟಮೊದಲನೆಯದು. ೧೩ನೇ ಶತಮಾನದಲ್ಲಿ ರಾಢಾ ಮತ್ತು ಅದರ ಉತ್ತರದ ನೆರೆಯ ಪ್ರದೇಶಗಳಿಂದ ಈ ವಂಶದ ಹೆಚ್ಚಿನ ಹೊಸ ಬಲ ತಮಿಳುನಾಡಿಗೆ ಹರಿದು ಬಂದಿತು (೯೨೪, ೪೭, ೨೦೯; ೯೩೫/೬, ೯, ೯೩೯/೪೦, ೨೪೨;೯೩೪/೩೫, ೧೦೨ ಮುಂತಾದವು). ಮತ್ತಮಯೂರ ವಂಶದ ರುದ್ರಶಿವನು ಪ್ರಾರಂಭಿಸಿದ ಮತ್ತೊಂದು ಪಂಥದ ಹೆಸರು ಆಮರ್ದಕ, ೧೫ನೇ ಶತಮಾನದಲ್ಲಿ ವಲಸೆಬಂದು ತಿರುನೆಲ್ವೇಲಿ ಜಿಲ್ಹೆಯಲ್ಲಿ ನೆಲೆಯೂರಿತು (೯೭೭, ೪೬೫, ೫೬೯).

ಪಂಥದ ಒಳಸೇರುವಿಕೆಯ ಪುನರಾವೃತ್ತಿಯ ಅಲೆಗಳು ಮತ್ತು ತಮಿಳುನಾಡಿನಲ್ಲಿದ್ದ ಲಕ್ಷಾಧ್ಯಾಯಿ ವಂಶದ ಶಿಷ್ಯರ ಹೆಚ್ಚುತ್ತಿರುವ ಸಂಖ್ಯೆಯು ೧೩ನೇ ಶತಮಾನದ ಪ್ರಥಮಾರ್ಧದಲ್ಲಿ ಬಹಳ ಸಂಖ್ಯೆಯಲ್ಲಿ ಶಾಖೆಗಳ ಹುಟ್ಟಿಗೆ ಕಾರಣವಾದವು. ೧೩ನೇ ಶತಮಾನ ಅನೇಕ

---

* ಈ ವ್ಯಕ್ತಿಯು ತಿರುಮುರೈಯದ ೯ನೇ ಪುಸ್ತಕದ ತಿರುಮಲಿಂಗೈಯನೇ ಆಗಿರಲು ಸಾಧ್ಯವೆ?

ರೀತಿಯಲ್ಲಿ ಉತ್ಕೃಷ್ಟವಾಗಿದ್ದು ಅದು ತಮಿಳುನಾಡಿನ ಶೈವಧರ್ಮದ ಇತಿಹಾಸದಲ್ಲಿ ಅತ್ಯಂತ ವೈಭವದ ಕಾಲವಾಗಿದ್ದಿತು. ಈ ಅವಧಿಯಲ್ಲಿಯೇ ದೃಢೀಕರಣ, ನೀತಿಸಂಹಿತೆಯ ನಿರ್ಮಾಣ, ವಿವಿಧ ದರ್ಶನಗಳ ಅಂಶಗಳ ಕ್ರೋಢೀಕರಣ ಮತ್ತು ತರ್ಕಸಮ್ಮತೀಕರಣ ನಡೆಯಿತು. ಈ ಶತಮಾನದಲ್ಲಿ ಗೋಳಕಿ ಸಂಸ್ಥೆಗಳ ಮತ್ತು ಆಚಾರ್ಯರ ಸಂಖ್ಯೆಯಲ್ಲಾದ ತೀವ್ರಗತಿಯ ಹೆಚ್ಚಳವನ್ನು ಕುರಿತು ಈಗಾಗಲೇ ಹೇಳಲಾಗಿದೆ; ಹಾಗೇ ಅನೇಕ ಹೊಸ ವಂಶಗಳು ಜನ್ಮತಾಳಿದ ಬಗೆಗೂ ಹೇಳಲಾಗಿದೆ. ಈ ವಂಶಗಳು ಕೆಲವು ಪ್ರಾಚೀನ ಶೈವ ದೇವಾಲಯಗಳ ವ್ಯವಸ್ಥೆಯ ಮತ್ತು ಆಡಳಿತದ ನಿರ್ವಹಣೆಯನ್ನು ವಹಿಸಿಕೊಂಡವು. ಅರಸರು ಮತ್ತು ಪ್ರಜೆಗಳು ದೇವಾಲಯ ಮತ್ತು ಮಠಗಳಿಗೆ ಉದಾರ ದತ್ತಿಗಳನ್ನು ಅತ್ಯಂತ ಅಧಿಕ ಸಂಖ್ಯೆಯಲ್ಲಿ ನೀಡಿದುದು ಇದೇ ಶತಮಾನದಲ್ಲಿ ಎಂಬುದನ್ನು ನಾವು ಕಾಣುತ್ತೇವೆ. ದೇವಾಲಯಗಳ ಶಿಲ್ಪಕಲೆ ಮತ್ತು ದೇವತಾ ವಿಗ್ರಹಗಳ ಕೆತ್ತನೆ ಕಲೆಗಳು ವೈವಿಧ್ಯತೆ, ಸ್ಥಳ, ವಿವರಣೆ ಮತ್ತು ಸಂಕೀರ್ಣತೆ ಈ ಎಲ್ಲ ದೃಷ್ಟಿಯಿಂದ ಇಲ್ಲಿ ಅಭಿವೃದ್ಧಿ ಹೊಂದಿದವು.

**ಹೊಸ ಬೆಳವಣಿಗೆಗಳು:**

ಈ (೧೩ನೆಯ) ಶತಮಾನದ ಇನ್ನೊಂದು ಮಹತ್ವದ ಘಟನೆ ಎಂದರೆ- ಮೆಯ್ಕಂಡನು ಶೈವಪಂಥದ (sensu strictu) ತಾತ್ತ್ವಿಕ ಪರಿಕಲ್ಪನೆಗಳನ್ನು ತಮಿಳುಭಾಷೆಗೆ ತರ್ಜುಮೆ ಮಾಡಿದುದು. ಶಿವಜ್ಞಾನಸಿದ್ಧಿಯಾರ್ ಗ್ರಂಥ ಕೂಡ ಪ್ರಕಟವಾದದ್ದು ಇದೇ ಶತಮಾನದಲ್ಲಿ. ಹದಿನಾಲ್ಕು ಸಿದ್ಧಾಂತ ಪಠ್ಯಗಳಲ್ಲಿ ನಾಲ್ಕು ಪಠ್ಯಗಳು ಆಗ ಲಭ್ಯವಿದ್ದವು. ಕೊನೆಯವನಾದ ಉಮಾಪತಿಶಿವಾಚಾರ್ಯನು ಮುಂದಿನ ಶತಮಾನದಲ್ಲಿ ಮುಂದುವರೆದಿದ್ದರೂ ಎಲ್ಲ ನಾಲ್ವರೂ ಸಂತಾನಾಚಾರ್ಯರು ಇದೇ ಶತಮಾನದವರಾಗಿರುವ ಸಾಧ್ಯತೆ ಹೆಚ್ಚಿರುತ್ತದೆ. ಗುರುಶಿಷ್ಯರು ಒಂದೇ ವಂಶಕ್ಕೆ ಸೇರಿದವರಾಗಿದ್ದುದರಿಂದ ಈ ಕಾಲದಲ್ಲಿ ಅನೇಕ ಮಠ ಮತ್ತು ದೇವಾಲಯಗಳಿಗೆ ತಮಿಳು ಬಣ್ಣ ಬಂದಿತು. ಇದಕ್ಕೆ ಸ್ವತಃ ಮೆಯ್ಕಂಡನ್‌ನ ಉದಾಹರಣೆಯೇ ಒಂದು ಮಾದರಿಯಾಗಿದೆ. ತಿರುಚ್ಚೆತ್ತಿಮುರ್ರಮ್‌ವಂಶದ ಎದಿರೊಪ್ಪಿಲದರ್ (ಸೋಮನಾಥ)ನು ತಮಪ್ಪೆರುಮಳ್ ತಿರುಮಂಡಮ್‌ದ ಅಧ್ಯಕ್ಷನಾಗಿದ್ದನು (೯೯೧೧, ೧೯೯). ತತ್ತರುಡೈಯರ್ ಆಚಾರ್ಯ (ಈಶಾನದೇವ)ನು ಒಂದು ಸನ್ಯಾಸಿಮಠವನ್ನು ದತ್ತಿ ಪಡೆದನು (೯೯೧೧, ೪೯, ಕ್ರಿ.ಶ. ೧೨೪೦). ಅರಿಯುವ್ರತಂಕೊಂಡ ಮುದಲಿಯಾರ್‌ನು ನಂದಿಕೇಶ್ವರಮಠದಲ್ಲಿ ವಾಸಿಸುತ್ತಿದ್ದನು (೯೯೧೨, ೨೫೯). ಪುಕಳಿದೇವರ್ ಒಂದು ಪವಿತ್ರ ಸನ್ಯಾಸಿಮಠದ ಅಧಿಪತಿಯಾಗಿದ್ದನು (೯೯೧೪, ೫೪). ಜ್ಞಾನಾಮೃತಾಚಾರ್ಯ ಸಂತಾನದ ಪುಕಳಿಪ್ಪೆರುಮಾಳ್‌ನನ್ನು ತಿರುಜ್ಞಾನಮ್ ಗ್ರಂಥ ಪಠಿಸಲು ನೇಮಿಸಲಾಗಿತ್ತು (೯೯೧೬, ೩೫೯, ಕ್ರಿ.ಶ. ೧೨೫೬). ಜೀಯರ್ ಸಂತಾನದ ಸೋಳನ್-ಶೀಯನ್ (ಅಘೋರದೇವ)ನ ಉಲ್ಲೇಖ ೯೯೧೬ ವರದಿಯ ಶಾಸನ ೩೬೪(ಕ್ರಿ.ಶ. ೧೨೨೨)ರಲ್ಲಿ ಬರುತ್ತದೆ. ತಿರುಚ್ಚಿರ್ರಂಬಲ-ಮುಡೈಯಾರ್ ತಿರುತ್ತೆಯೂರ್ ನಾಯನಾರ್‌ನು ಅಭಿಮುಕ್ತನ್ ಮಠದ ನಿವಾಸಿಯಾಗಿದ್ದನು (೯೯೨೭, ೩೧೭, ಕ್ರಿ.ಶ. ೧೨೮೩). ಉಯ್ಯನಿನ್ರಾಡುವಾನ್-ಕಂದನ್ (ಈಶಾನದೇವ)ನು

ತಿರುಜ್ಞಾನ ಸಂಬಂದನ್-ಕುಕೈ ಎಂಬ ಸನ್ಯಾಸಿಮಠವನ್ನು ಕಟ್ಟಿಸಿದನು (೧೯೨೭)೮,೩೧೧ ಕ್ರಿ.ಶ. ೧೨೦೭). ಜಯತ್ತುವಾಯ್ತರ್ (ವಾಮದೇವ) ತ್ಯಾಗವಿನೋದನ್‌ಮಠದಲ್ಲಿ ವಾಸಿಸುತ್ತಿದ್ದನು (೧೯೩೫/೬, ೧೪೬). ಇಂಥ ಉದಾಹರಣೆಗಳ ಸಂಖ್ಯೆಯನ್ನು ಹೆಚ್ಚಿಸಬಹುದು.

ತಮಿಳು ಸಾರ್ವಜನಿಕರು ಗೋಳಕಿಪಂಥವನ್ನು ಸ್ವೀಕರಿಸುವುದರ ಮತ್ತು ಹೆಚ್ಚಿನ ಪ್ರಮಾಣದಲ್ಲಿ ಅದರಲ್ಲಿ ಪಾಲ್ಗೊಳ್ಳುವುದರ ಪರಿಣಾಮವಾಗಿ ಕೆಲವು ಹೊಸ ಬೆಳವಣಿಗೆಗಳು ತಲೆದೋರಿದವು. ಈ ಮೊದಲು ಗಮನಿಸಿದಂತೆ, ಶೈವ (sensu strictu) ಪಂಥ ತಮಿಳುನಾಡನ್ನು ಪ್ರವೇಶಿಸುವುದಕ್ಕೆ ಮುಂಚೆ ಅಲ್ಲಿ ಪಾಶುಪತ ಮತ್ತು ಭಕ್ತಿಪಂಥಗಳು ವಿಕಾಸಹೊಂದುವ ಸ್ಥಿತಿಯಲ್ಲಿದ್ದವು. ಕಾಪಾಲಿಕ ಮತ್ತು ಬಹುಶಃ ಕೌಲಗಳಂಥ ಇನ್ನೂ ಕೆಲವು ಶೈವಪಂಥಗಳು ಕೂಡ ಇದ್ದವು. ಕಾಪಾಲಿಕನೊಬ್ಬನು ಹೊಸ ಶೈವಪಂಥವನ್ನು ಸ್ವೀಕರಿಸಿದುದನ್ನು ನಾವು ಈಗಾಗಲೇ ಉಲ್ಲೇಖಿಸಿದ್ದೇವೆ. ಹೀಗೆ ಹೊಸಧರ್ಮಕ್ಕೆ ಮತಾಂತರ ಹೊಂದಿದವರು ಆಗಲೇ ಒಂದಿಲ್ಲೊಂದು ಶೈವಪಂಥದ ಅನುಯಾಯಿಗಳಾಗಿದ್ದು ಶಿವನೊಬ್ಬನೇ ಪರಮೋಚ್ಚ ದೇವರೆಂದು ನಂಬಿದವರಾಗಿದ್ದರು. ಹಳೆಯ ಮತ್ತು ಹೊಸ ಪಂಥಗಳ ಸಮ್ಮಿಶ್ರಣ ಪ್ರಕ್ರಿಯೆ ಅಡೆತಡೆಯಿಲ್ಲದೆ ಸಾಗಿದ್ದಿತು. ಉತ್ತರದಿಂದ ವಲಸೆ ಬಂದ ಗೋಳಕಿಯರು ತಮಿಳು ನೆಲದಲ್ಲಿ ತಮ್ಮ ಧರ್ಮ ಸ್ಥಿರವಾಗಿ ನೆಲೆಗೊಳ್ಳುವಂತೆ ಮಾಡಲು, ಇಂಥ ಸ್ಥಿರೀಕರಣವನ್ನು ಮತ್ತು ವಿವಿಧ ದರ್ಶನಗಳ ಅಂಶಗಳನ್ನು ಒಟ್ಟುಗೂಡಿಸುವುದರಿಂದಾಗುವ ಲಾಭಗಳನ್ನು ಗುರುತಿಸಿಕೊಂಡರು. ದೇವಾಲಯಗಳಲ್ಲಿ **ತಿರುಪ್ಪಡಿಯಮ್**‌ಗಳನ್ನು ಅರ್ಪಿಸುವುದು ಈ ಪ್ರಕ್ರಿಯೆಯಲ್ಲಿ ಅವರು ಇಟ್ಟ ಒಂದು ಮುನ್ನಡೆ ಆಗಿದ್ದಿತು. ಬಹುಶಃ ಗೋಳಕಿಪಂಥ ತಮಿಳುನಾಡನ್ನು ಪ್ರವೇಶಿಸುವುದಕ್ಕೆ ಮೊದಲೇ ಈ ಸಂಪ್ರದಾಯ ರೂಢಿಯಲ್ಲಿದ್ದಿತು. ಮುಂದಿನ ಶತಮಾನಗಳಲ್ಲಿ ಈ ಪದ್ಧತಿ ಯಾಂತ್ರಿಕವಾಗಿ ಮುಂದುವರೆಯಿತು. ಗೋಳಕಿಧರ್ಮದ ಅನುಯಾಯಿಗಳು ಈ ಪದ್ಧತಿಯನ್ನು ಒಪ್ಪಿಕೊಂಡದ್ದು ಆಳುಡೈಯಪ್ಪಿಳ್ಳೈಯರ್‌ನನ್ನು ತಿರುಜ್ಞಾನಸಂಬಂಧ ಎಂದು ಹೆಸರಿಸುವಲ್ಲಿ ಕಂಡುಬರುತ್ತದೆ. ಹೊಸದಾಗಿ ನಾಮಕರಣ ಮಾಡಿ ಈ ಸಂತನನ್ನು ತಮ್ಮ ಗುಂಪಿಗೆ ಸೇರಿಸಿಕೊಂಡರು. ಈ ಕ್ರಿಯೆ ಎಷ್ಟೊಂದು ಉತ್ಸಾಹದಿಂದ ನಡೆಯಿತೆಂದರೆ, ಈ ಸಂತನ ಹೆಸರಿನಲ್ಲಿ ಅನೇಕ ಮಠಗಳು ಮತ್ತು ಕುಕೈ (qukais)ಗಳು ಸ್ಥಾಪಿಸಲ್ಪಟ್ಟವು, ಮತ್ತು ಕೆಲವು ಅನುಯಾಯಿಗಳು ತಮಗೆ ಆ ಸಂತನ ಹೆಸರನ್ನೇ ಇಟ್ಟುಕೊಂಡರು. ೧೧ನೇ ಶ್ಲೋಕವು ರಚನೆಯಾಗಿದ್ದು ಮತ್ತು ಆಳುಡೈಯಪ್ಪಿಳ್ಳೈಯರ್‌ನ ದಶಕ (Decads)ಗಳಿಗೆ ಅದನ್ನು ಸೇರಿಸಿದ್ದು, ಇದೇ ಅವಧಿಯ ಸುಮಾರು (ಸ್ವಾಮಿ, ೧೯೭೧).

ಹಳೆಯ ಪಂಥಗಳ ದೃಢೀಕರಣದ ಮತ್ತು ಅವು ಹೊಸಪಂಥದಲ್ಲಿ ಸೇರ್ಪಡೆಯಾದುದರ ಉದಾಹರಣೆಯು ತಮಿಳುಭಾಷೆಯ ಶಿವಸ್ತೋತ್ರಗಳನ್ನು ಮತ್ತು ಶೈವಧರ್ಮಕ್ಕೆ ಸಂಬಂಧಿಸಿದ ವಿಷಯವನ್ನು ಕುರಿತು ಬರೆಯಲಾದ ಕೃತಿಗಳ ಸಂಗ್ರಹವೆನಿಸಿದ ತಿರುಮುರೈ ಎಂಬ ೧೨ ಸಂಪುಟಗಳ ಮಾಲಿಕೆಯಲ್ಲಿ ಕಂಡುಬರುತ್ತದೆ. ಈ ಮಾಲಿಕೆಯ ಕೆಲವು ಸಂಪುಟಗಳು ಮುಂಚಿನ

ಶತಮಾನಗಳಲ್ಲಿ ಬರೆಯಲಾಗಿದ್ದವೊ ಏನೊ, ಆ ಮಾಲಿಕೆಯ ಎಲ್ಲ ಸಂಪುಟಗಳು ಹೊರಬಂದದ್ದು ೧೩ನೇ ಶತಮಾನದಲ್ಲಿ.

ಹೊರಗಿನಿಂದ ಹೇರಲಾದ ಇಂಥ ಕೆಲವು ವಿಷಯಗಳು ಧಾರ್ಮಿಕ ಮಟ್ಟದಲ್ಲಿ ಗೋಳಕಿಪಂಥದ ಬಣ್ಣವನ್ನು ತುಸುಮಟ್ಟಿಗೆ ಬದಲಾಯಿಸಿದವು. ಶಾಸನಗಳಲ್ಲಿ ಬಳಸಿದ ದಕ್ಷಿಣಗೋಳಕಿ ಪದ ಸ್ಪಷ್ಟವಾಗಿ ಈ ಮಾರ್ಪಡಿಸಲ್ಪಟ್ಟ ಗೋಳಕಿ ಪಂಥಕ್ಕೆ ಅನ್ವಯಿಸುತ್ತದೆ (೧೯೨೪, ೨೩೪, ಕ್ರಿ.ಶ. ೧೩೦೩, ೧೯೪೦/೧, ಸಿ.ಪಿ. ೩೩, ಕ್ರಿ.ಶ. ಕೆ. ೫೭೭). ಆಂಧ್ರಪ್ರದೇಶದಲ್ಲಿದ್ದ ಗೋಳಕಿಪಂಥ ಕೂಡ ಇಂಥ ಬೆಳವಣಿಗೆಗಳಿಗೆ ಒಳಗಾಗಿರಲೇಬೇಕು. ಆದರೆ ಆ ಬೆಳವಣಿಗೆಗಳಿಂದಾದ ಮಾರ್ಪಾಡುಗಳಾವವೆಂಬುದು ತಿಳಿದಿಲ್ಲ. ೧೩ನೇ ಶತಮಾನದ ಸುಮಾರಿಗೆ ನಾವು "ನವಗೋಳಕಿ" (೧೯೫೬/೭, ೪) ಮತ್ತು "ಅಭಿನವಗೋಳಕಿ (೧೯೪೦/೧, ೫೬) ಪದಗಳ ಬಗೆಗೆ ಕೇಳುತ್ತೇವೆ. ಇವು ಮೂಲ ಗೋಳಕಿ ಪಂಥದಲ್ಲಾದ ಬದಲಾವಣೆಯನ್ನು ಸೂಚಿಸುತ್ತವೆ.

**ಸ್ಥಿರೀಕರಣ:**

ಶೈವಪಂಥದ ತಾತ್ತ್ವಿಕ ಅಂಶಗಳನ್ನು ಕುರಿತು ತಮಿಳಿನಲ್ಲಿ ಬರೆಯಲಾದ ಎಂಟು ಗ್ರಂಥಗಳ ಕರ್ತೃ ೧೪ನೇ ಶತಮಾನದ ಪೂರ್ವಾರ್ಧದಲ್ಲಿ ಬದುಕಿದ್ದ ಉಮಾಪತಿ ಎಂದು ನಂಬಲಾಗಿದೆ. ಹೀಗೆ ೧೪ನೇ ಶತಮಾನವು ಸಿದ್ಧಾಂತಶಾಸ್ತ್ರಗಳೆಂದು ಜನಪ್ರಿಯವಾಗಿದ್ದ ಶೈವಸಿದ್ಧಾಂತದ ಪಠ್ಯಗಳ ನಿರ್ಮಾಣಕಾರ್ಯ ಪೂರ್ತಿ ಮುಗಿದುದನ್ನು ಕಂಡಿತು. ಈ ಗ್ರಂಥಗಳು ಶೈವರ ಸೈದ್ಧಾಂತಿಕ ಪಠ್ಯಗಳೆಂದು ತಮಿಳುನಾಡಿನಲ್ಲಿ ಇಂದಿಗೂ ಉಳಿದಿವೆ.

೧೧ನೇ ಶತಮಾನದಷ್ಟು ಹಿಂದೆ ತಂಜಾವೂರು ಜಿಲ್ಲೆಯ ಮಯೂರಂ ತಾಲೂಕಿನ ತಿರುವಾವಡುತುರೈ ಗ್ರಾಮವು ಶೈವ (sensu strictu) ಪಂಥದ ಬಹು ದೊಡ್ಡ ಕೇಂದ್ರವಾಗಿದ್ದಿತು. ೧೧ನೇ ಶತಮಾನದ ಮೊದಲ ದಶಕದಲ್ಲಿ ಮೊದಲನೆಯ ರಾಜರಾಜನ ಆಳಿಕೆಯಲ್ಲಿ ಅಲ್ಲಿದ್ದ ದೇವಾಲಯದ ನಿರ್ವಹಣೆಯನ್ನು ಸ್ಪಷ್ಟವಾಗಿ ಗೋಳಕಿವಂಶದ ಸದಾಶಿವನೆಂಬ ಆಚಾರ್ಯನು ವಹಿಸಿಕೊಂಡಿದ್ದನೆಂದು ತಿಳಿದುಬರುತ್ತದೆ (ARE, 1924/5, ಭಾಗ-೨, ಪ್ಯಾರಾ ೧೩). ಚೋಳ ಅರಸರು ಈ ಸ್ಥಳದಲ್ಲಿದ್ದ ದೇವಾಲಯ ಮತ್ತು ಸನ್ಯಾಸಿಮಠಗಳಿಗೆ ಅಧಿಕ ಸಂಖ್ಯೆಯಲ್ಲಿ ನೀಡಿದ ದತ್ತಿಗಳು ಧಾರ್ಮಿಕ ಸಂಸ್ಥೆಗಳ ಊರ್ಜಿತ ಸ್ಥಿತಿಯ ದ್ಯೋತಕಗಳಾಗಿರುತ್ತವೆ. ೧೧ನೇ ಮತ್ತು ೧೨ನೇ ಶತಮಾನಗಳಲ್ಲಿ ಅಲ್ಲಿ ಏಳು ಮಠಗಳು ಕಾರ್ಯ ನಿರ್ವಹಿಸುತ್ತಿದ್ದವು.

| | | | |
|---|---|---|---|
| ೧ | ಸರ್ವದೇವನ್ ಮಠ | ಮೊದಲನೆಯ ರಾಜೇಂದ್ರ | ೧೯೨೫, ೧೦೩, ಕ್ರಿ.ಶ. ೧೦೪೦ |
| ೨ | ತಿರುವೀದಿ ಮಠ | ಮೊದಲನೆಯ ಕುಲೋತ್ತುಂಗ | ೧೯೨೫, ೧೪೭, ಕ್ರಿ.ಶ. ೧೦೮೪ |
| ೩ | ತಿರುನೀಲಕಂಠನ್ ಮಠ | ಮೊದಲನೆಯ ಕುಲೋತ್ತುಂಗ | ೧೯೨೫, ೧೪೪ ಕ್ರಿ.ಶ. ೧೧೦೧ |
| ೪ | ಪರಮಾಣವಾಚಕನ್‌ಮಠ | ಮೊದಲನೆಯ ಕುಲೋತ್ತುಂಗ | ೧೯೨೫, ೧೫೫, ಕ್ರಿ.ಶ. ೧೧೧೯ |

| | | | |
|---|---|---|---|
| ೫ | ನಾರಪತ್ತೆಣ್ಣಾಯಿರವನ್ ಮಠ | ಮೊದಲನೆಯ ಕುಲೋತ್ತುಂಗ | ೧೯೨೫, ೧೫೦, ಕ್ರಿ.ಶ. ೧೧೧೧ |
| ೬ | ಶಿವ್ವೆಯೋಕ ನಾಯಕನ್ ಮಠ | ಮೊದಲನೆಯ ಕುಲೋತ್ತುಂಗ | ೧೯೨೫, ೧೪೮, ಕ್ರಿ.ಶ. ೧೧೧೬ |
| ೭ | ಶಿವ್ವೆಯೋಕನಾಯಕನ್ ಮಠ | ವಿಕ್ರಮ | ೧೯೨೫, ೧೪೯, ಕ್ರಿ.ಶ. ೧೧೨೧ |
| ೮ | ಪಂಚನದಿವಾಣನ್ ಮಠ | ವಿಕ್ರಮ | ೧೯೨೫, ೬೭ |

ಇವುಗಳಲ್ಲಿ ಅನೇಕ ಮಠಗಳ ಕೆಲಸ ಮುಖ್ಯವಾಗಿ ತಪಸ್ವಿಗಳು, ಭಕ್ತಾದಿಗಳಿಗೆ ಊಟ ಮತ್ತು ವಸತಿಯನ್ನು ಒದಗಿಸುವುದಾಗಿತ್ತು. ಆದ್ದರಿಂದ ಅಲ್ಲಿ ಶಾಶ್ವತವಾಗಿ ವಾಸಿಸುವವರ ಮತ್ತು ಸಂಚಾರಿಗಳಾಗಿದ್ದು ಅಲ್ಪಾವಧಿ ವಾಸಿಸುವವರ ಸಂಖ್ಯೆ ಅಧಿಕವಿದ್ದಿತೆಂದು ಊಹಿಸುವುದು ಕಷ್ಟವೇನಲ್ಲ. ಅದೇ ತರಹದ ಚಟುವಟಿಕೆಯ ಕೇಂದ್ರವಾಗಿದ್ದ, ಆದರೆ ಅದಕ್ಕಿಂತ ಸ್ವಲ್ಪ ಕಡಿಮೆ ಪ್ರಮಾಣದ ಚಟುವಟಿಕೆ ನಡೆಯುತ್ತಿದ್ದ, ಎರಡನೆಯಮಠ ಪಾಂಡ್ಯ ಅರಸರ ಆಶ್ರಯದಲ್ಲಿ ತಿರುನೆಲ್ವೆಲಿ ಜಿಲ್ಲೆಯ ಅಂಬಾಸಮುದ್ರಮ್ ತಾಲೂಕಿನ ತಿರುವಲೀಶ್ವರಮ್‌ದಲ್ಲಿ ಕಾರ್ಯನಿರ್ವಹಿಸುತ್ತಿದ್ದಿತು. ವೀರಪಂಡಿತನ್ ಮಠವು ತಿರುವಾವಡುತುರೈಯಲ್ಲಿಯ ಅದರ ಜೋಡಿ ಮಠಗಳ ಹಾಗೆ ಅದೇ ಜನಹಿತ ಕಾರ್ಯಗಳಲ್ಲಿ ತೊಡಗಿದ್ದಿತು.

ಹಿಂದಿನ ಪುಟಗಳಲ್ಲಿ ತೋರಿಸಿರುವಂತೆ, ಈ ಮಠಗಳು ಗೋಳಕಿ ಗುಣಲಕ್ಷಣಗಳನ್ನು ಹೊಂದಿದ್ದು ಅವು ತಾತ್ತ್ವಿಕ ಸಿದ್ಧಾಂತಗಳ ಪ್ರಚಾರಕ್ಕಾಗಿ ತಮಿಳೀಕರಿಸಿದ ಸಿದ್ಧಾಂತ ಪಠ್ಯಗಳನ್ನು ಕೂಡಲೇ ಒಪ್ಪಿಕೊಂಡವು. ಆದ್ದರಿಂದ ಅವುಗಳಿಗಾಗಿ ಗೋಳಕಿಧರ್ಮವನ್ನು ತಮಿಳುನಾಡಿನ ತುಂಬೆಲ್ಲ ಪಸರಿಸಲು ಅಡೆತಡೆಗಳಿಲ್ಲದ ಮುಕ್ತಮಾರ್ಗ ತೆರೆದುಕೊಂಡಿತು. ತಿರುವಾವಡುತುರೈಯಲ್ಲಿಯ ಶಿವಪ್ರಕಾಶನ ಶಿಷ್ಯನಾದ ನಮಶ್ಶಿವಾಯ (ಪಂಚಾಕ್ಷರ ದೇಶಿಕ)ನು ೧೫ನೇ ಶತಮಾನದ ಪ್ರಥಮಾರ್ಧದಲ್ಲಿ ತಿರುವಾವಡುತುರೈಯಲ್ಲಿಯ ಮಠವನ್ನು ಗುರುತಿಸಿ ಅದನ್ನು ಗಟ್ಟಿಗೊಳಿಸಿದಂತೆ ತೋರುತ್ತದೆ. ಗೋಳಕಿ ಸಂಸ್ಥೆಗಳಿಗೆ ತನ್ನ ಆಳಿಕೆಯ ಉದ್ದಕ್ಕೂ ಏಕೈಕ ಆಶ್ರಯದಾತವಾಗಿರುವ ಚೋಳರಾಜ ಮನೆತನದ ಪತನದ ತರುವಾಯ ಇಂಥ ಯತ್ನಗಳು ಅವಶ್ಯವಾಗಿದ್ದವು ಎಂಬುದನ್ನು ಊಹಿಸಬಹುದಾಗಿದೆ. ಅವರ ತರುವಾಯ ಬಂದ ವಿಜಯನಗರ ಅರಸರು ಶೈವ ಮತ್ತು ವೈಷ್ಣವ ಧರ್ಮಗಳೆರಡಕ್ಕೂ ಸಮಾನ ಆಶ್ರಯ ನೀಡಿದರು. ಹಾಗೇ ವರ್ಣಾಶ್ರಮ ಧರ್ಮದ ಪರಿಕಲ್ಪನೆಗಳನ್ನೊಳಗೊಂಡ ವೇದಮಾರ್ಗ ಮತ್ತು ಸ್ಮಾರ್ತ ಪಂಥಗಳ ಪುನರುಜ್ಜೀವನಕ್ಕೆ ಕೂಡ ಚಾಲನೆಕೊಟ್ಟರು. ಅದರ ಪರಿಣಾಮವಾಗಿ ಕಾಮಕೋಟಿ ಮತ್ತು ಶಾರದಾಪೀಠಗಳು ಅನುಕ್ರಮವಾಗಿ ಕಂಚಿಪುರಮ್ ಮತ್ತು ಶೃಂಗೇರಿಯಲ್ಲಿ ಸ್ಥಾಪಿಸಲ್ಪಟ್ಟವು. ಹೀಗೆ ಅವರ ಸಾಮ್ರಾಜ್ಯದಲ್ಲಿ ಎಲ್ಲ ಪ್ರಮುಖ ಧಾರ್ಮಿಕ ಪಂಥಗಳು - (ಶೈವ, ವೈಷ್ಣವ, ಸ್ಮಾರ್ತ ಮತ್ತು ಲಿಂಗಾಯತ)- ಅರಸರ ವೈಯಕ್ತಿಕ ಒಲುವು ಯಾವುದರ ಕಡೆಗಿದ್ದರೂ, ಸಮಾನ ಪೋಷಣೆ ಪಡೆದವು. ಗೋಳಕಿ ಆಚಾರ್ಯರು ಮತ್ತು ಅವರ ಮಠಗಳಿಗೆ ಈ ಅರಸರು ಆಶ್ರಯ ನೀಡಿದ ಉದಾಹರಣೆಗಳಿಗೆ ಕೊರತೆ ಇಲ್ಲ. ಇಂಥ ಪರಿಸ್ಥಿತಿ ವಿವಿಧ ಧಾರ್ಮಿಕ ಪದ್ಧತಿಗಳಲ್ಲಿ ಉತ್ಸಾಹಭರಿತ ಸ್ಪರ್ಧಾಭಾವ ಹುಟ್ಟಲು ಅವಕಾಶ ಕಲ್ಪಿಸಿತು. ಅದರ ಪರಿಣಾಮವಾಗಿ ೧೪ನೇ ಮತ್ತು ೧೫ನೇ ಶತಮಾನಗಳು ಟೀಕಾತ್ಮಕ, ವಿವರಣಾತ್ಮಕ ಮತ್ತು (ವಿವಾದಗಳ) ಚರ್ಚಾತ್ಮಕ ಸ್ವರೂಪದ ಬೃಹತ್‌ಗಾತ್ರದ ಧಾರ್ಮಿಕ ಸಾಹಿತ್ಯವನ್ನು ಸೃಷ್ಟಿಸಿದವು.

ಇದೇ ಅವಧಿಯಲ್ಲಿ ಅಸ್ತಿತ್ವದಲ್ಲಿದ್ದ ಸನ್ಯಾಸಿ ಮಾರ್ಗಗಳು ಮತ್ತು ಅವುಗಳ ಆಡಳಿತಾತ್ಮಕ ಮತ್ತು ಸಂಘಟನಾತ್ಮಕ ಪದ್ಧತಿಗಳು ವ್ಯವಸ್ಥಿತವಾದ ಸ್ವರೂಪ ಮತ್ತು ಸಂಹಿತೆಯನ್ನು ಪಡೆದುವು.

ಈ ಹಿನ್ನೆಲೆಯಲ್ಲಿ ನಮಶ್ಶಿವಾಯ ಆಡಿದ ಪಾತ್ರದ ಮೌಲ್ಯಮಾಪನ ಮಾಡಬೇಕಿದೆ. ೧೧ನೇ ಶತಮಾನದಿಂದಲೇ ತಿರುವಾವಡುತುರೈ ಗೋಳಕಿಧರ್ಮದ ಅತ್ಯಂತ ಪ್ರಭಾವೀ ಕೇಂದ್ರವಾಗಿದ್ದಿತೆಂಬುದು ನಿರ್ವಿವಾದಿತ ಸಂಗತಿ. ೧೪ನೇ ಶತಮಾನದಲ್ಲಿ ತಮಿಳುನಾಡು ಎದುರಿಸಿದ ಹೊಸರಾಜಕೀಯ ಪರಿಸ್ಥಿತಿಗಳ ಒತ್ತಡದ ಪರಿಣಾಮವಾಗಿ ಆಗಿನ ಕಾಲದ ಧಾರ್ಮಿಕ ಸಂಸ್ಥೆಗಳಿಗೆ ತಮ್ಮ ಉಳಿವಿಗಾಗಿ ಸಂಘಟನೆ ಮತ್ತು ಆಡಳಿತಾತ್ಮಕ ವಿಷಯಗಳಲ್ಲಿ ಆನುಷಂಗಿಕ ಬದಲಾವಣೆಗಳನ್ನು ಮಾಡಿಕೊಳ್ಳುವುದು ಅನಿವಾರ್ಯವಾಯಿತು. ತಿರುವಾವಡುತುರೈ ಸಂಸ್ಥೆಯ ಇತಿಹಾಸದಲ್ಲಿ ನಮಶ್ಶಿವಾಯ ಆಡಿದ ಪಾತ್ರ ಏನೆಂದರೆ— ತಿರುವಾವಡುತುರೈಯನ್ನು ಗೋಲಕಿ ಅಥವಾ ದಕ್ಷಿಣ ಗೋಲಕಿ ಧರ್ಮದ ಅಭ್ಯಾಸ ಮತ್ತು ಪ್ರಸಾರದ ಕೇಂದ್ರವನ್ನಾಗಿಸುವ ನಿಟ್ಟಿನಲ್ಲಿ ದೂರಗಾಮಿ ಪರಿಣಾಮ ಬೀರಬಹುದಾದ ಬದಲಾವಣೆಗಳನ್ನು ಅದರ ಕಾರ್ಯವೈಖರಿಯಲ್ಲಿ ಅಳವಡಿಸಿದ್ದುದಾಗಿತ್ತು. ಅಲ್ಲಿರುವ ಹಲವಾರು ಮಠಗಳನ್ನು ಒಂದೇ ಆಡಳಿತಾತ್ಮಕ ವ್ಯವಸ್ಥೆಯ ಅಡಿಯಲ್ಲಿ ತಂದು ಅವುಗಳನ್ನು ಸಂಘಟಿಸಿದುದು, ನಮಶ್ಶಿವಾಯನು ಈ ನಿಟ್ಟಿನಲ್ಲಿ ತೆಗೆದುಕೊಂಡ ಅನೇಕ ಕ್ರಮಗಳಲ್ಲಿ ಒಂದು. ನಮಶ್ಶಿವಾಯ ಹಾಕಿದ ತಳಪಾಯ ಭದ್ರ ಅಷ್ಟೇ ಅಲ್ಲ, ಅದು ಬೌದ್ಧಿಕವಾಗಿ ಫಲವತ್ತೂ ಆಗಿತ್ತು. ಮುಂದುವರಿದ ಗುರುಪರಂಪರೆಯಲ್ಲಿ ಪ್ರಭಾವ, ಸಾಮರ್ಥ್ಯ ಮತ್ತು ಮುಂದಾಲೋಚನೆ ಹೊಂದಿದ ವ್ಯಕ್ತಿಗಳಷ್ಟೇ ಇದ್ದಿರಲಿಲ್ಲ; ಅದರಲ್ಲಿ ಮಹಾ ವಿದ್ವಾಂಸರೂ ಇದ್ದರೆಂಬುದಕ್ಕೆ ಅವರ ಆಶ್ರಯದಲ್ಲಿ ಹೊರಬಂದ ಹೆಚ್ಚಿನ ಗಾತ್ರದ ಸೈದ್ಧಾಂತಿಕ ಸಾಹಿತ್ಯವೇ ಸಾಕ್ಷಿಯಾಗಿರುತ್ತದೆ. ಅವುಗಳಲ್ಲಿ ಅನೇಕ ಗ್ರಂಥಗಳು ಸ್ವತಃ ಮಠಾಧಿಪತಿಗಳಿಂದ ಇಲ್ಲವೆ ಅವರ ಶಿಷ್ಯರಿಂದ ಬರೆಯಲಾಗಿದ್ದವು. (ಅನನ್, ೧೯೬೨).

**ನಂತರದ ಚರಿತೆ:**

ತಿರುವಾವಡುತುರೈ ಆಧಿನಮ್ ತನ್ನ ವ್ಯಾಪಕ ಪ್ರಭಾವದಿಂದಾಗಿ ಮುಂದಿನ ಶತಮಾನಗಳಲ್ಲಿ ಊರ್ಜಿತಾವಸ್ಥೆಯಲ್ಲಿ ಮುಂದುವರೆಯಿತು. ಮತ್ತು ಕಾಲಕ್ರಮದಲ್ಲಿ ತನ್ನಂಥ ಇನ್ನೂ ಎರಡು, ಧರ್ಮಪುರಮ್ ಮತ್ತು ತಿರುಪ್ಪನಂದಲ್ ಆಧೀನಮ್, ಪರಂಪರೆಗಳಿಗೆ ಹುಟ್ಟುಹಾಕಿತು. ಈ ಪರಂಪರೆಗಳು ಧಾರ್ಮಿಕ ಮತ್ತು ಸೈದ್ಧಾಂತಿಕ ನಂಬುಗೆಗಳ ಪ್ರಚಾರಕ್ಕೆ ಮೀಸಲಿರಿಸಿದ ಪವಿತ್ರ ಚಟುವಟಿಕೆಗಳು ಚೆನ್ನಾಗಿ ಗೊತ್ತಿರುವುದರಿಂದ ಅವುಗಳನ್ನು ಇಲ್ಲಿ ಉಲ್ಲೇಖಿಸುವ ಅವಶ್ಯಕತೆ ಇರುವುದಿಲ್ಲ. ಈ ಆಧಿನಮ್‌ಗಳು (ತಿರುವಾವಡುತುರೈಯಲ್ಲಿಯ ಮಾತೃ ಸಂಸ್ಥೆಯನ್ನೊಳಗೊಂಡು) ದೇವಾಲಯಗಳ ನಿರ್ದಿಷ್ಟ ಗುಂಪುಗಳ ಮೇಲೆ ನಿಯಂತ್ರಣ ಸಾಧಿಸಿ, ಅವುಗಳ ಸುವ್ಯವಸ್ಥೆ ಮತ್ತು ನಿರ್ವಹಣೆಯ ಮೇಲ್ವಿಚಾರಣೆ ನಡೆಯಿಸುತ್ತಿವೆ. ಸದ್ಯಕ್ಕೆ ತಿರುನೆಲ್ವೆಲಿಯಲ್ಲಿದ್ದ ವೇಂಬತ್ತೂರ್‌ಮಠವು ತಿರುವಾವಡುತುರೈ ಆಧೀನಮ್‌ದ ಶಾಖೆಯಾಗಿ ಕಾರ್ಯನಿರ್ವಹಿಸುತ್ತಿದೆ. ಅಲ್ಲದೆ ಅದರ ಆಚಾರ್ಯರ ಹೆಸರುಗಳು ಗೋಳಕಿ ಆಚಾರ್ಯರ ಹೆಸರುಗಳನ್ನು ಇನ್ನೂ ನೆನಪಿಗೆ ತರುತ್ತಿವೆ (ಉದಾ: ಈಶಾನ ಶಿವಾಚಾರ್ಯ).

**ಉಪಸಂಹಾರ- ಒಂದು ಹಿನ್ನೋಟ:**

ಶೈವಧರ್ಮೀಯ ಪಾಶುಪತ ಪಂಥದ ಉಗಮವನ್ನು ಕ್ರಿಸ್ತಶಕದ ಪ್ರಾರಂಭದ ಶತಮಾನಗಳಲ್ಲಿ ರಾಜಸ್ತಾನ, ಗುಜರಾತ, ಸೌರಾಷ್ಟ್ರ ಮತ್ತು ಮಧ್ಯ ಭಾರತವನ್ನೊಳಗೊಂಡ ಪ್ರದೇಶದಲ್ಲಿ ಗುರುತಿಸಬಹುದು. ವಾಯವ್ಯದ ಕೆಲವು ಭಾಗಗಳನ್ನು ಆಳುತ್ತಿದ್ದ ಭಾರತೀಯ ಮೂಲದ ಹಾಗೂ ಹೊರಗಿನಿಂದ ಬಂದ ಪಾಶುಪತ ಪಂಥದ ಅನುಯಾಯಿಗಳು ತಮ್ಮನ್ನು "ಪರಮ ಮಾಹೇಶ್ವರರು" ಎಂದು ಕರೆದುಕೊಂಡರು (ಚಟ್ಟೋಪಾಧ್ಯಾಯ, ೧೯೭೦). ಹಾಗೆ ಕರೆದುಕೊಳ್ಳುವಲ್ಲಿ ತಾವು ರುದ್ರನ ಭಕ್ತರು (ಉಪಾಸಕರು) ಎಂದು ಸೂಚಿಸುವ ಉದ್ದೇಶ ಇದ್ದಿತು. ಲಾಕುಲಿಶ (ಕ್ರಿ.ಶ. ೧ನೇ ಮತ್ತು ೨ನೇ ಶತಮಾನಗಳು) ಎಂಬವನು ಆ ಪಂಥಕ್ಕೆ ಕೆಲವು ಹೆಚ್ಚಿನ ಅಂಶಗಳನ್ನು ಕೂಡಿಸಿ, ಅದರಲ್ಲಿ ಕೆಲವು ಬದಲಾವಣೆಗಳನ್ನು ಮಾಡಿದನು. ಅದರ ಪರಿಣಾಮವಾಗಿ ಅವನ ಅನುಯಾಯಿಗಳು ತಮ್ಮನ್ನು ಲಾಕುಲಿಶ-ಪಾಶುಪತರೆಂದು ಕರೆದುಕೊಳ್ಳುತ್ತ ತಮ್ಮದೇ ಆದ ಪ್ರತ್ಯೇಕ ಗುಂಪನ್ನು ಮಾಡಿಕೊಂಡರು. ಪಾಶುಪತ ಪಂಥದ ಸೂತ್ರಗಳನ್ನು ಸಂಗ್ರಹಿಸಿ ಅವುಗಳನ್ನು ಕ್ರಮಬದ್ಧವಾಗಿ ಕ್ರೋಢಿಕರಿಸಿದ ಶ್ರೇಯಸ್ಸು ಕೌಂಡಿನ್ಯ ರಾಶೀಕಾರ (ಕ್ರಿ.ಶ. ೪೦೧ ಮತ್ತು ೪೨೫) ನಿಗೆ ಸಲ್ಲುತ್ತದೆ. ಶೈವಧರ್ಮ (sensu latu)ದ ಚರಿತ್ರೆಯಲ್ಲಿ ಇದೊಂದು ಮಹತ್ವದ ಮುಂದುವರಿಕೆ. ೫ನೇ ಮತ್ತು ೮ನೇ ಶತಮಾನಗಳ ಮಧ್ಯೆ ಯಾವಾಗಲೋ ಮಾಹೇಶ್ವರಪಂಥದ ಅನುಯಾಯಿಗಳು ಶೈವರು ಮತ್ತು ಪಾಶುಪತರು ಎಂಬ ಎರಡು ಪಂಥಗಳಾಗಿ ವಿಭಜಿಸಲ್ಪಟ್ಟರು. ಈ ವಿಭಜನೆಗೆ ಬಹುಶಃ ತಮ್ಮ ಧರ್ಮದ ತಾತ್ತ್ವಿಕ ತಳಹದಿಯ ಬಗೆಗೆ ಅವರಲ್ಲಿಯ ಭಿನ್ನಾಭಿಪ್ರಾಯ ಕಾರಣವಾಗಿರಬಹುದು. ಆದರೆ ಲಾಕುಲೀಶರು ತಮ್ಮೆದುರಿಗಿರಿಸಿದ್ದ ಆದರ್ಶವನ್ನು ಸಾಕ್ಷಾತ್ಕರಿಸಿಕೊಳ್ಳಲು ಬೇಕಾದ ಧಾರ್ಮಿಕ ಆಚರಣೆಗಳನ್ನು ಅನುಸರಿಸುವಲ್ಲಿ ಅವರಲ್ಲಿ ಭಿನ್ನಾಭಿಪ್ರಾಯವಿರಲಿಲ್ಲ (ದಿವಾನಜಿ, ೧೯೫೫). ಇಷ್ಟು ಹೊತ್ತಿಗೆ ಶೈವ ಪಂಥಗಳು ಪಲ್ಲವರು ಆಳುತ್ತಿದ್ದ ದ್ವೀಪವನ್ನೊಳಗೊಂಡು, ಭಾರತದ ತುಂಬ ಹರಡಿದ್ದವು.

೯ನೇ ಶತಮಾನದಿಂದೀಚೆಗೆ ಶೈವಧರ್ಮದ ನಾಲ್ಕು ಪ್ರಮುಖ—ಶೈವ (sensu strictu), ಪಾಶುಪತ, ಕಾರುಣಿಕ ಸಿದ್ಧಾಂತ ಮತ್ತು ಕಾಪಾಲಿಕ (ಶಾರೀರಕ ಭಾಷ್ಯದ ಮೇಲೆ ವಾಚಸ್ಪತಿ ಮಿಶ್ರನ ಶಬ್ದಾರ್ಥನಿರೂಪಣೆ)— ಪಂಥಗಳ ಬಗೆಗೆ ಕೇಳುತ್ತೇವೆ. ಈ ಪಂಥಗಳು ಭಾರತದ ತುಂಬ ಬೇರೆ ಬೇರೆ ಭಾಗಗಳಲ್ಲಿ ಪಸರಿಸಿದ್ದವು. ಅವುಗಳ ನಡುವಿನ ಭಿನ್ನತೆಗಳು ಆಚರಣೆಯ ಮಟ್ಟದಲ್ಲಿಯಕಿಂತಲೂ ಸೈದ್ಧಾಂತಿಕ ಮಟ್ಟದಲ್ಲಿ ಹೆಚ್ಚು ಸ್ಪಷ್ಟವಾಗಿದ್ದವು. ಮಧ್ಯಪ್ರದೇಶದಲ್ಲಿದ್ದ ಮತ್ತಮಯೂರ ವಂಶವು ಸ್ವಲ್ಪ ಬದಲಾವಣೆ ಹೊಂದಿದ ಮೊದಲಿನ ಪಾಶುಪತ ಪಂಥದ ಶಾಖೆಯಾಗಿದ್ದ ಶೈವಪಂಥ (sensu strictu)ಕ್ಕೆ ಸೇರಿದ್ದಿತು. ಆ ಕಾಲಾವಧಿಯಲ್ಲಿ ತಮಿಳುನಾಡಿನಲ್ಲಿಯ ಧಾರ್ಮಿಕ ವಾತಾವರಣ, (ಲಾಕುಲೀಶರಲ್ಲದ) ಪಾಶುಪತ ಪಂಥದ* ಪ್ರಭುತ್ವವನ್ನು ಹೊರತುಪಡಿಸಿ, ಭಾರತದ ಬೇರೆಡೆಯಲ್ಲಿಯ

---

* ಪಲ್ಲವ, ಪ್ರಾಚೀನ ಚೋಳ, ಮತ್ತು ಪ್ರಾಚೀನ ಪಾಂಡ್ಯ ಅರಸರ ಅವಧಿ (೬ನೇ ಶತಮಾನದಿಂದ ೧೦ನೇ ಶತಮಾನ)ಯಲ್ಲಿ ರೂಢಿಯಲ್ಲಿದ್ದ ಶೈವಪಂಥಗಳ ಬಗೆಗೆ ಇನ್ನೂ ಹೆಚ್ಚಿನ ವಿಮರ್ಶಾತ್ಮಕ ಅಧ್ಯಯನಗಳು ಅವಶ್ಯವಿರುತ್ತವೆ.

ವಾತಾವರಣಕ್ಕಿಂತ ಭಿನ್ನವಾಗಿರಲಿಲ್ಲ. ಮೊದಲನೆಯ ರಾಜರಾಜನ ಕಾಲದಲ್ಲಿ ಈ ಪಂಥಗಳ ಜಾಲದಲ್ಲಿ ಗೋಳಕಿಪಂಥ ತನ್ನ ಎಳೆಯನ್ನು ಹೆಣೆಯಿತು. ೧೩ನೇ ಶತಮಾನದ ಪ್ರಾರಂಭದ ಸುಮಾರಿಗೆ ಹೊಸರಚನೆ ಹಳೆಯ ಜಾಲವನ್ನು ಸಂಪೂರ್ಣ ಅಳಿಸಿದ್ದಿತು. ಈ ನವೀಕರಣ ಪ್ರಕ್ರಿಯೆಯಲ್ಲಿ ಹಳೆಯ ಕೆಲವು ತುಕಡಿಗಳು ಮರುಜೀವ ಪಡೆದು, ಹೆಚ್ಚು ಸಶಕ್ತವಾಗಿ ಹೊಸ ವಿನ್ಯಾಸಕ್ಕೆ ಹೊಂದಿಕೊಂಡು, ಒಂದೇ ಮೂಲದವೆನ್ನುವಂತೆ ಸಮ್ಮಿಶ್ರವಾದವು.

೧೩ನೇ ಶತಮಾನದಲ್ಲಿ ಮತ್ತೊಂದು ಮಹತ್ವದ ಘಟನೆ ಸಂಭವಿಸಿದಾಗ ಈ ಬೆಳವಣಿಗೆಗಳ ಗತಿ ಮತ್ತು ರೀತಿ ಪರಾಕಾಷ್ಠೆ ಮುಟ್ಟಿದವು. ಅದು ಯಾವುದು ಎಂದರೆ, ಸಂಸ್ಕೃತಭಾಷೆಯಲ್ಲಿದ್ದ ಸೈದ್ಧಾಂತಿಕ ಪಠ್ಯಗಳನ್ನು ಸೂಕ್ತ ಬದಲಾವಣೆಗಳೊಂದಿಗೆ ತಮಿಳುಭಾಷೆಯಲ್ಲಿ ಅನುವಾದಮಾಡುವುದು. ಅದರ ಪರಿಣಾಮವಾಗಿ ಹೊಸಪಂಥ ಜನಸಾಮಾನ್ಯನನ್ನು ಮುಟ್ಟಿ ಅವನ ಹೃದಯ ಮತ್ತು ಮನಸ್ಸನ್ನು ಗೆದ್ದು, ತೀವ್ರಗತಿಯಲ್ಲಿ ತಮಿಳುನಾಡಿನ ತುಂಬೆಲ್ಲ ಪಸರಿಸಿತು. ಮತ್ತು ಅದರ ಬೇರುಗಳು ಅಧಿಕ ಸಂಖ್ಯೆಯಲ್ಲಿ ವೃದ್ಧಿಗೊಂಡು, ತಮಿಳು ನೆಲದಲ್ಲಿ ಆಳವಾಗಿ ಇಳಿದವು. ತಮಿಳುನಾಡಿನ ಕೆಲವೆಡೆ ರೂಢಿಯಲ್ಲಿದ್ದ ಕಾಪಾಲಿಕ, ಭೈರವ, ಪಾಶುಪತ, ಕೌಲ(?)ದಂಥ ಇನ್ನುಳಿದ ಶೈವ ಪಂಥಗಳು ಗೋಳಕಿಧರ್ಮದ ಒತ್ತಡಕ್ಕೆ ಮಣಿದು ಅದರಲ್ಲಿ ಸಂಪೂರ್ಣ ಲೀನವಾಗಿ ತಮ್ಮ ಗುರುತನ್ನು ಕಳೆದುಕೊಂಡವು.

ಹೀಗೆ ೧೦ನೇ ಮತ್ತು ೧೧ನೇ ಶತಮಾನಗಳಿಂದೀಚೆ ಗೋಳಕಿಪಂಥ ಅಗಾಧವಾಗಿ ಬೆಳೆದು ಗಟ್ಟಿಗೊಳ್ಳಲು ಅನುಕೂಲಕರ ಫಲವತ್ತಾದ ಮೆತ್ತನೆಯ ಹಾಸನ್ನು ತಮಿಳು ನೆಲ ಒದಗಿಸಿತು. ಈ ಪ್ರಕ್ರಿಯೆಯಲ್ಲಿ ಅದು ಮೊದಲಿನ ಪಾಶುಪತ ಪಂಥದ ಕೆಲವು ಅಂಶಗಳನ್ನು ತನ್ನ ಒಡಲಲ್ಲಿ ಸೇರಿಸಿಕೊಂಡಿತು. ಅನೇಕ ಶತಮಾನಗಳೊಳಗೆ ಹಾಯ್ದು ದೀರ್ಘಪ್ರಯಾಣ ಮಾಡಿ ಇಂದಿನ ತಮಿಳುನಾಡನ್ನು ತಲುಪಿರುವುದೇ ಈ ಶುದ್ಧಶೈವಪಂಥ. ಅದು ತನ್ನ ಮಾರ್ಗದುದ್ದಕ್ಕೂ ಅಖಂಡ ದ್ರವವಾಗಿ ಪ್ರವಹಿಸಿತು. ಅದರ ಪ್ರಯಾಣ ಮಧ್ಯೆ ಎಲ್ಲೂ ದೀರ್ಘ ವಿರಾವಾಗಲಿ, ಅಲ್ಪವಿರಾಮವಾಗಲಿ ಇರಲಿಲ್ಲ. ಆದ್ದರಿಂದ "ತಮಿಳುನಾಡ ಶೈವಧರ್ಮ", "ತಮಿಳು ಶೈವಧರ್ಮ", "ತಮಿಳ್‌ನಾಡ ಶೈವ ಸಿದ್ಧಾಂತ", "ತಮಿಳು ಶೈವ" ಮುಂತಾದ ಪದಗಳನ್ನು ಬಳಸಿದ ಎಲ್ಲ ಸಂದರ್ಭಗಳಲ್ಲಿ ಅವು ಉಲ್ಲೇಖಿಸುವ ಶೈವಧರ್ಮವು ತಮಿಳುನಾಡಿನಲ್ಲಿ ಘೋಷಿಸಲ್ಪಟ್ಟ ಗೋಳಕಿ-ಲಕ್ಷಾಧ್ಯಾಯಿ ಶೈವ ಪಂಥವಲ್ಲದೆ ಮತ್ತಾವುದೂ ಅಲ್ಲ ಎಂದು ಸ್ಪಷ್ಟವಾಗಿ ಹೇಳಬೇಕು. ಅದೇ ರೀತಿ, ಮೆಯ್ಕಂಡನು ತಮಿಳುನಾಡ ಶೈವಧರ್ಮದ ಜನಕನೆಂದು ಹೇಳಿಕೊಂಡಾಗ ಅವನು ಗೋಳಕಿ-ಲಕ್ಷಾಧ್ಯಾಯಿ ಮಾರ್ಗದ ಆಚಾರ್ಯನಾಗಿದ್ದು, ಶೈವಧರ್ಮದ ಗೋಳಕಿಪಂಥದ ಸೈದ್ಧಾಂತಿಕ ಸ್ತೋತ್ರಗಳನ್ನು ತಮಿಳುಭಾಷೆಗೆ ತರ್ಜುಮೆಮಾಡಿದವನೆಂದಲ್ಲದೆ ಮತ್ತೇನೂ ತಿಳಿಯಬಾರದು. "ಆಚಾರ್ಯರ ತಮಿಳು ಪರಂಪರೆ" ಕುರಿತು ಮಾತನಾಡುವಾಗ ಗೋಳಕಿ-ಲಕ್ಷಾಧ್ಯಾಯಿ ಸಿದ್ಧಾಂತವನ್ನು ಒಪ್ಪಿಕೊಂಡ ತಮಿಳುಪ್ರದೇಶದ ವ್ಯಕ್ತಿಗಳ ಬಗೆಗೆ ಹೇಳಬೇಕಲ್ಲದೆ ಮತ್ತಾರನ್ನೂ ಕುರಿತು ಅಲ್ಲ. ತಮಿಳು ಮಡಮ್(ಮಠ)ಗಳ ಬಗೆಗೆ ಹೇಳುವಾಗ ಗೋಳಕಿ ಲಕ್ಷಾಧ್ಯಾಯಿ ಪ್ರವಾಹವನ್ನು ಸೇರಿದ ತಮಿಳು ಭಾಷೆಯ ಮೂಲದವರು ಪ್ರಾರಂಭಿಸಿದ ಇಲ್ಲವೆ ಅಧಿಪತಿಗಳಾಗಿದ್ದ ಸನ್ಯಾಸಿಮಠಗಳನ್ನು ಸೂಚಿಸಬೇಕಲ್ಲದೆ ಮತ್ತಾವನ್ನೂ ಅಲ್ಲ.




ನಕಾಶೆ-೧

೧೨ನೇ ಶತಮಾನದಿಂದ ೧೪ನೇ ಶತಮಾನದ ಅವಧಿಯಲ್ಲಿ ಆಂಧ್ರಪ್ರದೇಶದಲ್ಲಿ ಗೋಲಕಿ ಸಂಸ್ಥೆಗಳ ಹರಡಿಕೆ.

೧. ಕರಿಮನಗರ ಜಿಲ್ಲೆ  ೨. ವಾರಂಗಲ್ ಜಿಲ್ಲೆ  ೩. ಕರ್ನೂಲ ಜಿಲ್ಲೆ

೪. ಗುಂಟೂರು ಜಿಲ್ಲೆ  ೫. ಅನಂತಪುರ ಜಿಲ್ಲೆ  ೬. ಕಡಪ್ಪಮ್ ಜಿಲ್ಲೆ

೭. ಕೋಲಾರ ಜಿಲ್ಲೆ (ಕರ್ನಾಟಕ)  ೮. ಚಿತೂರ ಜಿಲ್ಲೆ




ನಕಾಶೆ - ೨

೧೧ನೇ ಶತಮಾನದಿಂದ ೧೪ನೇ ಶತಮಾನದ ವರೆಗಿನ ಅವಧಿಯಲ್ಲಿ ತಮಿಳುನಾಡಿನಲ್ಲಿ ಗೋಳಕಿ ಸಂಸ್ಥಾನಗಳ ಹರಡಿಕೆ.

೧. ಉತ್ತರ ಅರ್ಕಾಟ ಜಿಲ್ಲೆ ೨. ಚೆಂಗ್ಲಪುತ್ ಜಿಲ್ಲೆ ೩. ದಕ್ಷಿಣ ಅರ್ಕಾಟ ಜಿಲ್ಲೆ
೪. ತಿರುಚಿ ಜಿಲ್ಲೆ ೫. ತಂಜಾವೂರು ಜಿಲ್ಲೆ ೬. ಮದುರೈ ಜಿಲ್ಲೆ
೭. ರಾಮನಾಥಪುರಂ ಜಿಲ್ಲೆ ೮. ತಿರುನೆಲ್ವೆಲಿ ಜಿಲ್ಲೆ




ಚಿತ್ರ-೧

ತಮಿಳುನಾಡು ಮತ್ತು ಆಂಧ್ರಪ್ರದೇಶಗಳಲ್ಲಿ ಗೋಲಕಿವಂಶಗಳ ವ್ಯಾಪ್ತಿ.

A. ಲಕ್ಷಾಧ್ಯಾಯಿ (ಭಿಕ್ಷಾ) ವಂಶ
B. ತಿರುವಾವಡುತುರೈ ವಂಶ
C. ತಿರುಚ್ಚತ್ತಿ ಮರ್‍ರಂ ವಂಶ
D. ನಂದಿಕೇಶ್ವರ ವಂಶ
E. ಶೆಂಬೈಕ್ಕುಡಿ ವಂಶ
F. ಕೀಳೈಮಠ ವಂಶ
G. ಮರುದಪ್ಪೆರುಮಾಳ್ ವಂಶ
H. ಪಂಡರಂಗವಾಣರ್ ವಂಶ
I. ಮೆಯ್ಕಂಡವಂಶ (ಸೊನ್ನೆ ಮೆಯ್ಕಂಡನ ಕಾಲ ಸೂಚಕ)
J. ಲಕ್ಷಾಧ್ಯಾಯಿ (ಭಿಕ್ಷಾ) ವಂಶ
K. ದೇವಿಕಾಪುರಂ ವಂಶ

## LITERATURE CITED

Anon., 1962. *Arastuvanaitu aranilaiyam* (in Tamil)
Tiruvavaduturai Adhinam, Mayuram

Arunachala Gounder, K. 1964. *Kayilaya paramparayil Tirupperuradhinam* (in Tamil)
Santalinga-adigalar Tamil College,
Decinnial number, Coimbatore, pp. 79-85

Balasubrahmanyam, S.R. 1966. *Early Chola Art,* Part I.
Asia Publishing House, Bombay

Chattopadhyaya, S. 1970. *Evolution of Hindu Sects,*
Munshiram Manoharlal, New Delhi

Chidananda murthy, M. 1966. *Kannada sasanagala samskrtika adhyayana* (Kannada)
Prasaranga, University of Mysore, Mysore

Divanji, P.C. 1955. *"The Mahesvara cult and its offshoots"*
J.As. Soc. Bombay, 30:6-22

Doraswami Pillai, Avvai. 1958. *A History of Tamil Literature* (Tamil)
Annamalai University, Annamalainagar

.............. 1968. *Sivagnanabhoda mulamum cirruraiyum* (Tamil)
Annamalai University, Annamalainagar

Gurumurthy, S. 1970. *"Some educational institutions in South India"*
Bull. Inst. Traditional Cult. University of Madras, Madras, 39-82

Handiqui, K.K. 1949, *Yasatilaka and Indian Culture*
Jaina Samskrti Samrakshana Sangha, Sholapur

Hirlal 1927. *Lokanayaki Nannitambi, Colar Kalattil Kalvi* (Tamil)
Tamil araichi 359-375

Mahalingam, T.V. 1957. "A family of Pasupata grhastas at Jambukesvaram" J.Or. Res., Madras 25: 79-85

...............1962. *"The Golaki matha"* in
*Essays in Philosphy,* pp. 446-451,
Ganesh & Co., Madras

Minakshisundarama Pillai, T.C. 1950. *Tiruvavaduturai adhina varalaru* (Tamil) Tiruvavaduturai Adhinam Mayuram

Mirashi, V.V. 1955. *Corpus Inscriptionum Indicarum: Inscriptions of the Kalachuri-* Chedi era. Arch. Surv. India, Delhi

Nandimath, N.C. 1944. *Kannada Nadina Caritre, Part II. Karnatakada dharmagalu* (Kannada) Kannada Sahitya Parished, Bangalore

Purnalingam Pillai, M.S. 1927. *Tamil India* Saiva Siddhanta works. Pub. Soc. Tinnevelly

Rajamanikkam M. 1958, *Saha samapa vajarchchi* (Tamil) Avvai Neelaham, Madras.

Rangacharya V. 1919, *A Topographical List of the Inscriptions of the Madras Presidency,* Government Press, Madras.

Sadasiva Pandarattar, T.V. 1963, *A History of Tamil Literature* (13, 14 and 15th centuries) Annamalai University, Annamalainagar.

Singaravelu, C. 1969, *Tirugnanasambandar varalalapparaichcum evrrattiranaism* (Tamil) South India Saiva Siddhanta Works Pub. Soc. Tinnevelly

Sinha, J 1970, *School of Shaivsm,* Sinha Pub. House Calcutta

Srinivasan K.R. 1960 *Some aspects of Religion as revealed by Early Monuments and Literature of the South* University of Madras, Madras

Swamy B.G.L. 1972, *A note on the Golaki and Kogali branches of Saivism* (in Press, Tamil Studies, Madras)

Venkataramanayya, N., and Somasekhara Sarma, M. 1960. "The Kakatiyas of Warangal" in Yazdani, G. *The Early History of the Deccan,* Oxford Univ. Press. London

Visvanath, S.V. 1921/2. "The Jambukesvaram grant of Vijayaranga Chokkanatha Nayaka: saka 1630". *E.I. 16.*

## ಅನುಬಂಧ

ಭಕ್ತಾದಿಗಳ ಭೋಜನದ ಉದ್ದೇಶ ಹೊಂದಿದ್ದ ಗೋಲಕಿ ಅಧೀನ ಮಠಗಳ ಪಟ್ಟಿ

| ಮಠದ ಹೆಸರು | ಶಾಸನ ಉಲ್ಲೇಖ | ಕಾಲ |
|---|---|---|
| | **ಅರ್ಕಾಟ್(ಉತ್ತರ)** | |
| ತಿಳ್ಳೈವಾಳಂದನನ್ | ೧೯೨೨, ೪೦೪ | ೧೧೨೧ |
| ಪುಷ್ಪಗಿರಿ-ಜೀಯರ್ | ೧೯೩೯/೪೦, ೧೦೬ | – |
| ಭಿಕ್ಷಾ (ಚಿದಂಬ್ರಮ್‌ದ) | ೧೯೩/೪೦, ೧೧೫ | ೧೩೦೧ |
| (ಹೆಸರಿಲ್ಲ) | ೧೯೩೯/೪೦, ೨೦೦ | ೧೪೦೩ |
| | **ಅರ್ಕಾಟ್ (ದಕ್ಷಿಣ)** | |
| ರಾಜನಾರಾಯಣ | ೧೯೧೮, ೧೭೯ | ೧೦೭೫ |
| ವಿಕ್ರಮ ಚೋಳನ್ | ೧೯೧೮, ೬೧ | – |
| ಏಳಿಶೈಮೋಹನ್ | ೧೯೩೯/೪೦, ೨೭೬ | – |
| | **ಚೆಂಗ್ಲಪೇಟ್** | |
| ಆಚಾರಶೀಲನ್ | ೧೯೩೨/೩, ೩೩ | ೧೧೨೩ |
| ವಾಲ್ಮರವನ್ | ೧೯೩೨/೩, ೨೬ | ೧೨೦೯ |
| ಗಂಡಗೋಪಾಲಮಣಿಕ್ಕನ್ | ೧೯೨೮/೯, ೩೩೦ | ೧೨೩೪ |
| | **ಮದುರೈ** | |
| ನರಲೋಕ ಸೂರ್ಯನ್ | ೧೯೧೫, ೪ | – |
| | **ಸೇಲಮ್** | |
| (ಹೆಸರಿಲ್ಲ) | ೧೯೧೩, ೪೩೧ | ೧೩೭೬ |
| | **ತಂಜಾವೂರು** | |
| ಸರ್ವದೇವನ್ | ೧೯೨೫, ೧೦೩ | ೧೦೪೦ |
| (ಹೆಸರಿಲ್ಲ) | ೧೯೨೭, ೨೭೭ | ೧೦೭೫ |
| ತಿರುವೀದಿ | ೧೯೨೫, ೧೪೭ | ೧೦೮೪ |
| ಮಾರ್ಕಂಡೇಯನ್ | ೧೯೨೫, ೨೪೩ | ೧೦೯೬ |
| ತಿರುನೀನವಿಟಂಕನ್ | ೧೯೨೫, ೧೪೪ | ೧೧೦೧ |
| ಪರಮಾಣವಾಚಕನ್ | ೧೯೨೫, ೧೫೫ | ೧೧೦೯ |
| ಶಿವಲೋಕನಾಯಕನ್ | ೧೯೨೫, ೧೪೮, ೧೪೯ | ೧೧೧೬, ೧೧೨೧ |
| ಪರಸಮಯ ಕೋಳರಿ | ೧೯೧೮, ೫೩೪ | ೧೧೨೧ |

| | | |
|---|---|---|
| ಪಂಚನದಿವಾಣನ್ | ೧೯೨೬, ೬೭ | ೧೧೨೨ |
| ಕುಲೋತ್ತುಂಗಚೋಳನ್ | ೧೯೨೭, ೨೭೨ | ೧೧೨೨ |
| ತಿರುಚಿತ್ರಂಬಲಮುಡೈಯಾನ್ | ೧೯೧೮, ೪೩೮ | ೧೧೨೨ |
| ತಿರುವಿರಾಮೀಶ್ವರಂ | ೧೯೨೫, ೨೭೧ | – |
| | **ತಿರುಚಿ** | |
| ಎಳುನೂರ್ರುವನ್ | ೧೯೧೪, ೧೭೯ | ೧೧೧೯ |
| ಪಂಜ್ಯೋತಿ | ೧೯೨೯/೩೦, ೨೪೬ | – |
| | **ತಿರುನೆಲ್ವೆಲಿ** | |
| ಗ್ರಾಮರಾಜನ್ | ೧೯೧೬, ೩೫೫, ೩೫೬, ೩೫೮ | ೧೨/೧೩ನೇ ಶತಮಾನ |
| ವೀರಪಂಡಿತನ್ | ೧೯೧೬, ೩೫೭ | " |
| (ಹೆಸರಿಲ್ಲ) | ೧೯೧೬, ೩೫೩ | ೧೩ನೇ ಶತಮಾನ |
| ತ್ಯಾಗಕುಂಜರಿ | ೧೯೧೭, ೬೨೯ | " |
| ಕರ್ಪೂರಾಯನ್ | ೧೯೪೦/೧, ೨೫೫ | – |
| ಶೆಯ್ಯನಂಪಿರಾಟ್ಟಿ | ೧೯೪೦/೧, ೨೯೨ | – |
| ಸುಂದರಪಾಂಡ್ಯನ್ | ೧೯೪೩/೪, ೧೯೭ | – |



# ಆಂಧ್ರಪ್ರದೇಶದ ಗೋಳಕಿಮಠ ಶಾಸನಗಳು:ಒಂದು ಅಧ್ಯಯನ

ಮೂಲ ಇಂಗ್ಲಿಷ್: ಸಿಂಥಿಯಾ ಟ್ಯಾಲ್ಬಟ್
ಕನ್ನಡಕ್ಕೆ: ಸದಾನಂದ ಕನವಳ್ಳಿ

ಕಾಕತೀಯ ಅರಸರಾದ ಗಣಪತಿದೇವ ಮತ್ತು ಅವನ ಮಗಳು ರುದ್ರಮದೇವಿ ಇವರು ಶೈವಗುರು ವಿಶ್ವೇಶ್ವರದೇವನಿಗೆ ನೀಡಿದ ಎರಡು ಗ್ರಾಮಗಳ ದತ್ತಿಯನ್ನು ದಾಖಲಿಸುವ, ಶಕವರ್ಷ ೧೧೮೩ರ (ಕ್ರಿ.ಶ. ೧೨೬೧) ಮಲ್ಕಾಪುರಂ ಶಾಸನ ತುಂಬ ಪ್ರಸಿದ್ಧವಾದುದು. ೧೯೩೦ರಿಂದಲೂ (JAHRS IV, pp. 147-162) ಶೈವಮತದ ಬೆಳವಣಿಗೆ[೧] ಮತ್ತು (ಉತ್ತರಭಾರತದ) ಕಲಚೂರಿರಾಜ್ಯದ ಇತಿಹಾಸ[೨] ಕುರಿತ ಅಭ್ಯಾಸಿಗಳು ಈ ಶಾಸನದಲ್ಲಿರುವ ಶೈವಮಠೀಯ ಸಂಸ್ಥೆಗಳ ಮತ್ತು ಗೋಳಕಿಮಠ ಪರಂಪರೆಯ ಮಾಹಿತಿಯನ್ನು ಪುನಃ ಪುನಃ ಬಳಸಿಕೊಂಡಿರುವರು. ಇದು ತನ್ನ ಕುತೂಹಲಕರ ಅಂಶ ಮತ್ತು ಅನ್ಯಪ್ರದೇಶಗಳಲ್ಲಿರುವ ಗೋಳಕಿಮಠಗಳ ಕಾರ್ಯಕಲಾಪ ಇವುಗಳಿಂದಾಗಿ ಬಹುಮಟ್ಟಿಗೆ ಎಲ್ಲರ ಗಮನ ಸೆಳೆದಿದೆ. ಆ ಅನ್ಯಪ್ರದೇಶಗಳೆಂದರೆ ಈ ಮಠಸಂಪ್ರದಾಯದ ಜನ್ಮಸ್ಥಳವಾದ ಮಧ್ಯಪ್ರದೇಶದ ಜಬಲಪುರ ಪರಿಸರ ಮತ್ತು ಹಲವಾರು ಶಾಖೆಗಳನ್ನು ಹೊಂದಿರುವ ತಮಿಳುನಾಡು. ವಿಶ್ವೇಶ್ವರಶಿವ ಮತ್ತು ಅವನ ಗುರುಪರಂಪರೆಯನ್ನೊಳಗೊಂಡ ಈ ಶಾಸನವನ್ನು ತ್ರಿಪುರಿರಾಜ್ಯದ ಶಾಸನಗಳೊಂದಿಗೆ ಇಟ್ಟು ಅಭ್ಯಸಿಸಿದರೆ ಈ ಮಠೀಯ ಪರಿವಾರವು ಅಲ್ಲಿಯ ರಾಜವಂಶದೊಂದಿಗೆ ಹೊಂದಿದ್ದ ಸಂಬಂಧ ಸ್ಪಷ್ಟವಾಗುತ್ತದೆ.[೩] ಹಾಗೆಯೇ ಈ ಶಾಸನದಲ್ಲಿ ಪ್ರಸ್ತಾಪಿತವಾಗಿರುವ ಮಠ ಮತ್ತು ಅಗ್ರಹಾರಗಳ ಸ್ಥಾಪನೆಗೆ ಸಂಬಂಧಿಸಿದ ವಿವರವು ತಮಿಳುನಾಡಿನ ಶೈವಮಠಗಳ ವ್ಯವಸ್ಥೆಯ ಬಗೆಗಿನ ನಮ್ಮ ತಿಳುವಳಿಕೆಯನ್ನು ಹೆಚ್ಚಿಸುತ್ತದೆ ಮತ್ತು ಅಂದಿನ ಎಲ್ಲ ಶೈವಮಠಗಳಲ್ಲಿ ೧೧ ರಿಂದ ೧೬ನೆಯ ಶತಮಾನದ ವರೆಗೆ ಈ ಗೋಳಕಿ ಪರಂಪರೆ ಪಡೆದ ಮುಖ್ಯತೆಯನ್ನು ಸ್ಪಷ್ಟಪಡಿಸುತ್ತದೆ.[೪]

ಗೋಳಕಿಮಠ ಸಂಪ್ರದಾಯ ಕಾಕತೀಯ ಕಾಲಘಟ್ಟದ ವ್ಯವಹಾರಗಳಲ್ಲಿ ಮಹತ್ವದ ಪಾತ್ರ ವಹಿಸಿರುವ ಸೂಚನೆಗಳಿದ್ದರೂ ಆದರ ಕಾರ್ಯಕಲಾಪಗಳನ್ನು ತಿಳಿದುಕೊಳ್ಳಲು ಆಂಧ್ರ ವಿದ್ವಾಂಸರಲ್ಲಿ ಆಸಕ್ತಿ ಕುದುರಿಲ್ಲ.[೫] "ಈ ಅನಾಸ್ಥೆಗೆ ಕಾರಣವೆಂದರೆ ಆಂಧ್ರದಲ್ಲಿ ಈ ಮಠ ಸಂಪ್ರದಾಯ ಕೇವಲ ೬೦ ವರ್ಷ (ಸು. ಕ್ರಿ.ಶ. ೧೨೩೪-೧೨೯೧) ಪ್ರಸಿದ್ಧಿ ಹೊಂದಿದ್ದುದು.

ಹತ್ತು ಶಾಸನಗಳಲ್ಲಿ ಬರುವ ಈ ಪ್ರಸಿದ್ಧಿಯ ಉಲ್ಲೇಖ ಮತ್ತು ಇಬ್ಬರು ಆಚಾರ್ಯರು ಕಾಕತೀಯ ಅರಸನಿಗೆ ಗುರುಗಳಾಗಿದ್ದ ಸಂಗತಿಗಳು ಕಾರಣವಾಗಿ, ಆ ಕಾಲಘಟ್ಟದಲ್ಲಿ ಅದು ಬಹಳ ಪ್ರಭಾವ ಬೀರಿದಂತೆ ತೋರುತ್ತದೆ. ಆದರೆ ತೆಲುಗು ಮತ್ತು ಸಂಸ್ಕೃತ ಭಾಷೆಯಲ್ಲಿರುವ ಸುಮಾರು ೪೦ ಶಾಸನಗಳನ್ನು ಆಧರಿಸಿ ಗೋಳಕಿಮಠ ಪರಂಪರೆಯು ಆಂಧ್ರದಲ್ಲಿ ವಿಸ್ತರಿಸಿದ ವಿವರಣೆಯನ್ನು ಪ್ರಸ್ತುತ ಲೇಖನದಲ್ಲಿ ಪ್ರತಿಪಾದಿಸುತ್ತೇವೆ.[೬] ಗೋಳಕಿಮಠದ ನೇರ ಉಲ್ಲೇಖವಿರುವ ಅಥವಾ ಗೋಳಕಿಮಠ ಪರಂಪರೆಯೊಂದಿಗೆ ಸಂಬಂಧ ಹೊಂದಿರುವ ವ್ಯಕ್ತಿಯನ್ನು ಹೆಸರಿಸಿರುವ ಶಾಸನಗಳನ್ನು ಮಾತ್ರ ಇಲ್ಲಿ ಪರಿಗಣಿಸಲಾಗಿದೆ. ಇದರಿಂದಾಗಿ, ನನ್ನ ವಿವರಣೆಯು ಗೋಳಕಿಮಠದೊಂದಿಗೆ ಸಂಬಂಧ ಹೊಂದಿದ್ದ ಕೆಲವು ವ್ಯಕ್ತಿಗಳನ್ನು ಕೈಬಿಟ್ಟಿರುವ ಸಾಧ್ಯತೆಯಿದೆ. ಎನ್. ಸುಂದರೇಶ್ವರರಾವ್ ಮತ್ತು ಬಿ.ಜಿ.ಎಲ್. ಸ್ವಾಮಿ[೭] 'ಶಿವ' ಶಬ್ದದೊಂದಿಗೆ ಮುಕ್ತಾಯವಾಗುವ ಹೆಸರಿನ ಆಚಾರ್ಯರು ಈ ಸಂಪ್ರದಾಯದವರೆಂಬ ಒಂದು ಸರಳ ಮಾರ್ಗವನ್ನು ಅನುಸರಿಸಿರುವರು. ಆದರೆ ಈ ಗ್ರಹಿಕೆಯು ನಿಖರವಾದುದೆಂದು ಹೇಳುವಂತಿಲ್ಲ. ಈ ಉಪಾಧಿಯನ್ನು ಬೇರೆ ಪಂಥಗಳಿಗೆ ಸೇರಿದ ಶೈವಗುರುಗಳೂ ಬಳಸುತ್ತಿದ್ದ[೮] ಸೂಚನೆಗಳೂ ಇವೆ. ಇದಲ್ಲದೆ, 'ಶಿವ' ಎಂಬ ಪ್ರತ್ಯಯ ಗೋಳಕಿಮಠದವರ[೯] ಹೆಸರುಗಳಿಗೆ ಕಡ್ಡಾಯವೂ ಆಗಿರಲಿಲ್ಲ. ಹಾಗಾಗಿ, ಈ ಶೈವಮತದ ಅಭ್ಯಾಸದಲ್ಲಿ ಪ್ರಗತಿಯನ್ನು ಸಾಧಿಸಬೇಕಿದ್ದರೆ, ಅಂದಿನ ವಿವಿಧ ಪರಂಪರೆಗಳ ವ್ಯತ್ಯಾಸ ತಿಳಿದುಕೊಳ್ಳುವುದು ಅವಶ್ಯವಿದೆ.

ಆಧುನಿಕ ವಿದ್ವಾಂಸರ ಬರಹಗಳಲ್ಲಿ[೧೦] ಗೋಳಕಿಮಠವನ್ನು ಬಹಳ ಸಲ ಪಾಶುಪತ ಪಂಥಕ್ಕೆ ಸೇರಿಸಲಾಗಿದೆ. 'ಪಾಶುಪತ' ಎಂಬ ಪದ ಅತ್ಯಂತ ವ್ಯಾಪಕ ಅರ್ಥದಲ್ಲಿ ಬಳಕೆಯಾಗುತ್ತ ಬಂದ ಕಾರಣ, ಈ ರೀತಿ ಸೇರಿಸುವುದು ಸರಿಯಾದುದಲ್ಲ. ಶೈವಪಂಥಗಳಲ್ಲಿ ಪ್ರಥಮವಾಗಿ ವಿಕಸಿಸಿದ ಪಾಶುಪತ ಪಂಥದಂತೆಯೇ ಗೋಳಕಿಮಠ ಶೈವಪಂಥವೂ ಆಗಮಸಾಹಿತ್ಯವನ್ನಾಧರಿಸಿದ್ದು, ಗುರುವಿನ ಪಾತ್ರಕ್ಕೆ ಮಹತ್ವಕೊಟ್ಟಿದ್ದಿತು. ಪಾಶುಪತದ ಒಂದು ಶಾಖೆ[೧೧] ಎಂದೇ ಪರಿಗಣಿತವಾಗುವ ಕಾಳಾಮುಖದಂತೆಯೇ ಗೋಳಕಿಮಠ ಪರಂಪರೆಯೂ ಮಠೀಯ ವಿಸ್ತೃತ ಜಾಲದ ಮೂಲಕ ಪ್ರಚುರಗೊಂಡಿದ್ದಿತು. ಆಂಧ್ರದಲ್ಲಿ ಗೋಳಕಿಮಠ ಆಗಮಿಸಿದ ಸ್ವಲ್ಪ ಹಿಂದಿನ ಕಾಲದಲ್ಲಿ ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ[೧೨] ಅತ್ಯಂತ ಪ್ರಚಲಿತವಿದ್ದುದು, ಈ ಕಾಳಾಮುಖ ಪಂಥವೇ. ಆಂಧ್ರದಲ್ಲಿ ಕಾಳಾಮುಖರ ಅಸ್ತಿತ್ವವು ಪೂರ್ವ ಚಾಲುಕ್ಯ ಇಮ್ಮಡಿ ಅಮ್ಮರಾಜನ[೧೩] ಆಳ್ವಿಕೆಯ ೧೦ನೆಯ ಶತಮಾನದ ಮಧ್ಯಕಾಲದಿಂದ ಕಾಕತೀಯ ಇಮ್ಮಡಿ ಬೇತ ಮತ್ತು ಇಮ್ಮಡಿ ದುರ್ಗಪ್ರೋಲರು[೧೪] ಆಶ್ರಯಪಿತ್ತ ಕಾಳಾಮುಖಗುರು ರಾಮೇಶ್ವರಪಂಡಿತನು ಬದುಕಿದ್ದ ೧೨ನೆಯ ಶತಮಾನದ ಮಧ್ಯದ ವರೆಗೆ ದಾಖಲಾಗಿದೆ. ಕಾಳಾಮುಖನಾಗಿದ್ದಿರಬಹುದಾದ ಇನ್ನೊರ್ವ ಶೈವಗುರು ಎಂದರೆ ೧೨ನೆಯ ಶತಮಾನದ ಅಂತ್ಯಕ್ಕೆ ಕೆಲವು ವರ್ಷ ಮಾತ್ರ ಆಳಿದ ಅರಸ ಮಹಾದೇವನ ಗುರು.[೧೫]

ಗೋಳಕಿಮಠ ಪರಂಪರೆಯು ಪಾಶುಪತಕ್ಕೆ ನಿಷ್ಠವಾಗಿರಲಿಲ್ಲವೆಂಬುದು ಮಲ್ಕಾಪುರಂ ಶಾಸನದಲ್ಲಿಯೆ ಸ್ಪಷ್ಟವಾಗಿ ಸೂಚಿತಗೊಂಡಿದೆ. ಈ ಶಾಸನದಲ್ಲಿ ಶೈವ, ಶೈವಸಿದ್ಧಾಂತ ಮತ್ತು (ಪಾಶುಪತ, ಕಾಳಾಮುಖ, ಕಾಪಾಲಿಕಗಳೂ ಒಳಗೊಂಡಂತೆ)ಶೈವಮತದ ನಾಲ್ಕು ಪಂಥಗಳಲ್ಲೊಂದಾದ, ಮಧ್ಯಯುಗೀನ ಧಾರ್ಮಿಕ ಸಾಹಿತ್ಯದಲ್ಲಿ[೧೬] ಭಿನ್ನವೆಂದು ಬಹಳ ಸಲ ಗುರುತಿಸಲಾದ ಶುದ್ಧಶೈವ ಈ ಶಬ್ದಗಳ ಪ್ರಯೋಗಗಳುಂಟು. ಇಂಥ ಗುರುತಿಸುವಿಕೆಗೆ ಮಧುಮತಿನಗರವು ಗೋಳಕಿಮಠದೊಂದಿಗೆ ನಿಕಟ ಸಂಬಂಧ ಹೊಂದಿರುವುದನ್ನು ತಿಳಿಸುವ [೧೭] ಕಲಚೂರಿ ಅರಸ ಇಮ್ಮಡಿ ಕೋಕಲ್ಲದೇವನ ಗರ್ಗಿ ಶಿಲಾಶಾಸನವು ಹೆಚ್ಚಿನ ಆಧಾರ ಒದಗಿಸುತ್ತದೆ. ಇದಕ್ಕೆ ಭಿನ್ನವೆನಿಸುವ ಪ್ರಖ್ಯಾತ ಪಾಶುಪತಗುರು ಲಕುಲೀಶನನ್ನು ಮತ್ತು ಅವನ ಸಿದ್ಧಾಂತವನ್ನು (ಸಿದ್ಧಾಂತ ಮತ್ತು ಆಗಮ)[೧೮] ಕಾಳಾಮುಖ ದಾಖಲೆಗಳು ಮೇಲಿಂದ ಮೇಲೆ ಹೆಸರಿಸುತ್ತವೆ. ಈ ಶೈವ (ಸಿದ್ಧಾಂತ) ಪಂಥ ಮತ್ತು ಪಾಶುಪತಗಳು ಭಿನ್ನ ದಾರ್ಶನಿಕ ನಿಲವನ್ನು ತಳೆದಿದ್ದಂತೆ ತೋರುವುದು. ಅಂದರೆ ಶೈವರು ವೈಶೇಷಿಕ ದರ್ಶನಕ್ಕೆ ಬದ್ಧರಾಗಿದ್ದರೆ ಪಾಶುಪತರು ನ್ಯಾಯದರ್ಶನದ [೧೯] ಅನುಯಾಯಿಗಳಾಗಿದ್ದರು. ಈ ಶುದ್ಧಶೈವ ಅಥವಾ ಶೈವಸಿದ್ಧಾಂತ ಪಂಥವು ಧಾರ್ಮಿಕ ಆಚರಣೆಗಳಲ್ಲಿ ಇತರರಿಗಿಂತ ಸೌಮ್ಯ ಮತ್ತು ಬ್ರಾಹ್ಮಣ ಸಂಪ್ರದಾಯನಿಷ್ಠೆಗೆ [೨೦] ವಾಲಿದುದಾಗಿತ್ತು. ಅದಕ್ಕೆ ದೊರೆತ ವ್ಯಾಪಕ ಮನ್ನಣೆಗೆ ಬಹುಶಃ ಇದೂ ಒಂದು ಕಾರಣವಾಗಿತ್ತು. ಅದು ಬೇರೆಡೆ ಕ್ಷೀಣಗೊಂಡರೂ ವಿಶೇಷತಃ ತಮಿಳುನಾಡಿನಲ್ಲಿ ಹೆಚ್ಚು ಜನಪ್ರಿಯತೆ ಸಾಧಿಸಿತು. ಅಲ್ಲಿ ಅದು ಶತಮಾನಗಳುದ್ದಕ್ಕೂ ತಮಿಳು ಭಾಷೆಯ[೨೧] ಮೂಲಕ, ಇಂದು ಶೈವಸಿದ್ಧಾಂತ ಹೆಸರಿನಿಂದ ಪ್ರಚಲಿತವಿರುವ ಶೈವಧರ್ಮ ಪರಂಪರೆಯಾಗಿ ವಿಕಸಿಸಿತು.[೨೨]

ಗೋಳಕಿಮಠದ ಗುರುಗಳು ಅದರ ಹುಟ್ಟಿನಿಂದಲೂ ರಾಯಪೋಷಣೆ ಹೊಂದಿದ್ದುದು ಈ ಪರಂಪರೆಯ ಅತ್ಯಂತ ಎದ್ದುಕಾಣುವ ಲಕ್ಷಣವಾಗಿತ್ತು. ಮಲ್ಕಾಪುರಂ ಶಾಸನದ ಪ್ರಕಾರ, ತ್ರಿಪುರಿಯ ಅರಸನಾದ ಯುವರಾಜನ ಆಶ್ರಯವು ಡಹಳಪ್ರಾಂತದಲ್ಲಿ ಮೂಲ ಗೋಳಕಿಮಠದ ಸ್ಥಾಪನೆಗೆ ಕಾರಣೀಭೂತವಾಗಿತ್ತು. ಈ ಶಾಸನೋಕ್ತ ವಿಶ್ವೇಶ್ವರಶಿವನ ಪರಂಪರೆಯ ಮೂಲ ಗುರುವು ಕ್ರಿ.ಶ. ೧೦ನೆಯ ಶತಮಾನದವನಾಗಿರಬಹುದಾದ[೨೩] ಈ ಅರಸನಿಂದ ಧಾರಾಳ ದತ್ತಿ ಪಡೆದನೆಂದು ತಿಳಿದುಬರುತ್ತದೆ. ಅಂದಿನಿಂದ ಕಲಚೂರಿಗಳು ಗೋಳಕಿಮಠದ ಗುರುಗಳನ್ನು ಗೌರವಿಸುತ್ತಲೇ ಬಂದರೆಂದು ಹೇಳಲಾಗುತ್ತದೆ. (ಆ ಮೂಲ ಗುರುವು) ಯುವರಾಜನಿಂದ ಮೂರು ಲಕ್ಷ ಗ್ರಾಮಗಳನ್ನು ಅಥವಾ ಮೂರು ಲಕ್ಷ ಆದಾಯ ನೀಡುವ ಗ್ರಾಮಗಳನ್ನು ದಾನವಾಗಿ ಪಡೆದುದನ್ನು ಆಂಧ್ರದ ಹಲವಾರು ಶಾಸನಗಳು ಉಲ್ಲೇಖಿಸುತ್ತವೆ. ಅಂದರೆ ಆ ಶಾಸನಗಳು ಗೋಳಕಿಮಠದ ಪ್ರಸ್ತಾಪ ಮಾಡುವಾಗಲೆಲ್ಲ 'ತ್ರಿಲಕ್ಷಗ್ರಾಮ' ಎಂಬ ಪದಗಳನ್ನು ಬಳಸುತ್ತವೆ. ೧೨ನೆಯ ಶತಮಾನದ ಜಬಲಪುರ ಪ್ರದೇಶದ ನಾಲ್ಕು ಶಾಸನಗಳು ವಿಶ್ವೇಶರಶಿವನ ಅಜ್ಜನು (ಗುರುವಿನ ಗುರು) ವಿಮಲಶಿವ[೨೪]ನೆಂದು ತಿಳಿಸುತ್ತವೆ. ಇದರಿಂದ, ಮಲ್ಕಾಪುರಂ ಶಾಸನ ಹೇಳುವಂತೆ ಗೋಳಕಿಮಠವು (ಡಹಳ) ಆ ರಾಜ್ಯದಲ್ಲಿ ಉಚ್ಛ್ರಾಯ

ಹೊಂದಿತೆಂಬುದು ದೃಢಪಡುತ್ತದೆ. ಮತ್ತು ವಿಮಲಶಿವ ಹಾಗೂ ಅವನ ಮೂವರು ಪೂರ್ವಜರು ಕಲಚೂರಿ ಅರಸರಾದ ಯಶಃಕರ್ಣ, ಗಯಾಕರ್ಣ, ನರಸಿಂಹ, ಜಯಸಿಂಹ ಮತ್ತು ವಿಜಯಸಿಂಹರಿಗೆ ರಾಜಗುರುಗಳಾಗಿದ್ದರೆಂದೂ ಆ ಶಾಸನಗಳು ತಿಳಿಸುತ್ತವೆ.

ವಿಮಲಶಿವನ ಶಿಷ್ಯ ಧರ್ಮಶಿವನು ಆಂಧ್ರದಲ್ಲಿ ತನ್ನ ಉಪಸ್ಥಿತಿ ದಾಖಲಿಸಿದ ಗೋಳಕಿಮಠದ ಪ್ರಥಮಗುರು. ಈ ಧರ್ಮಶಿವನ ಶಿಷ್ಯ ವಿಶ್ವೇಶ್ವರಶಿವ. ಧರ್ಮಶಿವನ ಪಾದಗಳನ್ನು ತ್ರಿಪುರಿಯ ದೊರೆಗಳು[೨೬] ಪೂಜಿಸುತ್ತಿದ್ದರೆಂದು ವಿಶ್ವೇಶ್ವರಶಿವ ಕೊಂಡಾಡಿರುವುದರಿಂದ ಅವನು ತನ್ನ ಜೀವನದ ಕೆಲ ಕಾಲವನ್ನು ಕಲಚೂರಿ ರಾಜ್ಯದಲ್ಲಿ ಕಳೆದಿರಬೇಕು. ೧೩ನೆಯ ಶತಮಾನದ ಆರಂಭದ ದಶಕಗಳಲ್ಲಿ ಚಾಂದೇಲರ ಮತ್ತು ಯಾದವರ ದಾಳಿಗಳಿಂದಾಗಿ ಕಲಚೂರಿ ರಾಜ್ಯ ಒಡೆಯತೊಡಗಿತ್ತು.[೨೭] ಹೀಗಾಗಿ ಧರ್ಮಶಿವನು ಆಂಧ್ರಕ್ಕೆ ಬಂದುದು ನಿಸ್ಸಂದೇಹವಾದುದು. ಈತನು ಆಂಧ್ರಕ್ಕೆ ಶಕ ೧೧೫೬(ಸು.ಕ್ರಿ.ಶ. ೧೨೩೪)ಕ್ಕಿಂತ ಮುಂಚೆ ಬಂದವನಾಗಿದ್ದಾನೆ. ಅವನ ಆಗಮನದ ಅತಿ ಹಳೆಯ ದಾಖಲೆ (ದಾಕ್ಷಾರಾಮ, ಪೂರ್ವ ಗೋದಾವರಿ ಜಿಲ್ಲೆ:SI I IV, 1056)ಯಲ್ಲಿ ಅವನನ್ನು ವಿಮಲಶಿವನ ಶಿಷ್ಯ ಮತ್ತು ಕಾಕತೀಯ ಅರಸ ಗಣಪತಿಯ ಗುರು ಎಂದು ಬಣ್ಣಿಸಲಾಗಿದೆ. ಹೀಗೆ, ರಾಜಗುರು ಆಗಿರುವ ಗೋಳಕಿಮಠದ ಪರಂಪರೆಯನ್ನು ಆಂಧ್ರದ ಹೊಸ ಪರಿಸರದಲ್ಲೂ ಧರ್ಮಶಿವ ಮುಂದುವರಿಸಿದ.

ರಾಜನಿಗೆ ಗುರುವಾಗುವ ಪ್ರಮುಖ ಸ್ಥಾನವನ್ನು ಧರ್ಮಶಿವನು ಇಷ್ಟು ಸುಲಭವಾಗಿ ಹೇಗೆ ಪಡೆದನೆಂಬುದು ಸ್ಪಷ್ಟವಿಲ್ಲ. ಬಹುಶಃ ಅವನಿಗಿಂತ ಹಿಂದಿನಿಂದಲೂ ಅಲ್ಲಿ ಗೋಳಕಿಮಠದ ಪ್ರಖ್ಯಾತಿ ಇತ್ತು. ಏನೆ ಇರಲಿ, ಕಾಕತೀಯರ ಮತ್ತು ಅವರ ಮಾಂಡಲಿಕರ ಆಶ್ರಯ ಪಡೆಯುವಲ್ಲಿ ಅವನು ಸಾಧಿಸಿದ ಯಶಸ್ಸನ್ನು ಈ ಕೆಳಗಿನ ಎರಡು ಶಾಸನಗಳು ಸ್ಪಷ್ಟಪಡಿಸುತ್ತವೆ: ಖಮ್ಮಮ್ ಜಿಲ್ಲೆಯ ಕೋಟಗಡ್ಡ ಗ್ರಾಮವನ್ನು ಧರ್ಮಶಿವನಿಗೆ ದತ್ತಿಯಾಗಿ ನೀಡಿದುದನ್ನು ಮತ್ತು ಅರಸ ಗಣಪತಿಯ ಸೋದರಿ ಮೈಲಮದೇವಿಯು ಅಲ್ಲಿ ಲಿಂಗಪ್ರತಿಷ್ಠಾಪನೆ ಮಾಡಿದುದನ್ನು ಒಂದು ಶಾಸನ (APRE 197 of 1965), ಕಾಕತೀಯರ ಕುಲದೇವತೆಯಾದ ವಾರಂಗಲ್ಲಿನ ಸ್ವಯಂಭುದೇವನಿಗೆ ಧರ್ಮಶಿವನ,[೨೮] ಮತ್ತು ಕಾಕತೀಯರ ಕಟ್ಟಾ ಮಿತ್ರ ವಿರ್ಯಾಲರುದ್ರ-ನಂದಾದೀಪ ವ್ಯವಸ್ಥೆ ಮಾಡಿದದನ್ನು ಇನ್ನೊಂದು ಶಾಸನ ತಿಳಿಸುತ್ತವೆ. ಧರ್ಮಶಿವನಿಗೆ ಸಂಬಂಧಿಸಿದ ನಾಲ್ಕನೆಯ ದತ್ತಿಯು (SII X. 315) ಇವನು ಶಕ ೧೧೬೯ರಲ್ಲಿ (ಸು. ಕ್ರಿ.ಶ. ೧೨೪೭) ಪ್ರಕಾಶಮ್ ಜಿಲ್ಲೆಯ ತ್ರಿಪುರಾಂತಕಮ್‌ನಲ್ಲಿ ಒಂದು ಉಗ್ರಾಣ (Treasury) ಮತ್ತು ಒಂದು ಮಠವನ್ನು ಕಟ್ಟಿಸಿದುದನ್ನು ತಿಳಿಸುತ್ತದೆ. ಅವನು ಕಟ್ಟಿಸಿದ ಕಟ್ಟಡಗಳು ಇವೆರಡೇ. ಹೀಗೆ ತ್ರಿಪುರಾಂತಕಮ್‌ದಲ್ಲಿ ಗೋಳಕಿಮಠದ ಶಾಖೆಯನ್ನು ಸ್ಥಾಪಿಸಿದ ತರುವಾಯದ ಎರಡು ದಶಕಗಳಲ್ಲಿ ಈ ಪರಂಪರೆಯ ಗುರುಗಳಿಂದ ಹಾಗೂ ಗುರುಗಳಿಗಾಗಿ ಮತ್ತು ಅಲ್ಲಿಯ ದೇವತೆಯ ಪೂಜೆಗಾಗಿ ಅನೇಕ ದತ್ತಿಗಳು ಕೊಡಲ್ಪಟ್ಟವು.[೨೯]

ಧರ್ಮಶಿವನಿಗೆ ಸಂಬಂಧಿಸಿದ ಶಾಸನ ಪ್ರದೇಶಗಳು ಮಹತ್ವದವುಗಳಾಗಿವೆ. ಅಂದು

ಆಂಧ್ರದಲ್ಲಿ ಅತಿ ಮಹತ್ವದ ಕೇಂದ್ರಗಳಾಗಿದ್ದ ವಾರಂಗಲ್ಲು, ದಾಕ್ಷಾರಾಮ ಮತ್ತು ತ್ರಿಪುರಾಂತಕಮ್ ಮುಂತಾದವುಗಳೊಂದಿಗೆ ಅವನು ಸಂಬಂಧ ಹೊಂದಿದ್ದ. ತ್ರಿಪುರಾಂತಕಮ್ ಶಾಸನ ಧರ್ಮಶಿವನಿಗೆ ಸಂಬಂಧಿಸಿದ ಕೊನೆಯ ದಿನಾಂಕವನ್ನು ಹೊಂದಿದೆ. ಆದುದರಿಂದ, ಆಂಧ್ರದಲ್ಲಿ ಅವನ ಕಲಾಪಗಳ ನಿರ್ದಿಷ್ಟ ಕಾಲಾವಧಿ ಸು. ಕ್ರಿ.ಶ. ೧೨೩೪ರಿಂದ ೧೨೪೭ರ ವರೆಗೆ ವ್ಯಾಪಿಸಿದೆ. ಅವನು ಆಂಧ್ರಕ್ಕೆ ತಾನೊಬ್ಬನೆ ವಲಸೆ ಬಂದಿರದೆ ತನ್ನ ಶಿಷ್ಯವರ್ಗದೊಂದಿಗೆ ಬಂದಿದ್ದನು. ಏಕೆಂದರೆ, ಆಂಧ್ರದಲ್ಲಿ ಧರ್ಮಶಿವನ ಆಗಮನದ ಹತ್ತು ವರ್ಷಗಳೊಳಗೆ ಎರಡನೆಯ ತಲೆಮಾರಿನ ಪರಿಪೂರ್ಣಶಿವನ ಒಂದು ಶಾಸನ (ಕ್ರಿ.ಶ. ೧೨೪೩) ದೊರೆಯುತ್ತದೆ. ಈ ಪರಿಪೂರ್ಣಶಿವನು ವಿಶ್ವೇಶ್ವರಶಿವನ ಮಗ (ಕೊಡಕು)ನಾಗಿದ್ದಾನೆ. ಗುಂಟೂರು ಜಿಲ್ಲೆಯ ಭಟ್ಟಿಪ್ರೋಲು ಗ್ರಾಮದ ಎರಡು ಶಾಸನಗಳೂ ಪರಿಪೂರ್ಣಶಿವನೇ ಹೊರಡಿಸಿದವುಗಳಾಗಿವೆ (ARIE 294 & 310 of 1936-37). ಅಲ್ಲಿಯ ದೇವಾಲಯ ಸಂಕೀರ್ಣದಲ್ಲಿ ಅವನು ಗಣನೀಯ ಅಧಿಕಾರ ಹೊಂದಿದ್ದುದನ್ನು ಈ ಶಾಸನಗಳು ಸೂಚಿಸುತ್ತವೆ. ಏಕೆಂದರೆ ಈ ಎರಡೂ ಶಾಸನ ಸಂದರ್ಭಗಳಲ್ಲಿ ದೇವತೆಯೊಂದಕ್ಕೆ ಸೇರಿದ್ದ ಭೂನಿವೇಶನಗಳನ್ನು ಪರಿಪೂರ್ಣಶಿವನು ಸಾನಿಯರಿಗೆ (ನರ್ತಕಿಯರು) ಹಂಚಿದ. ಇದೆಲ್ಲವನ್ನು ಕ್ರೋಢೀಕರಿಸಿ ನಾವು ಹೇಳುವುದೇನೆಂದರೆ, ಧರ್ಮಶಿವನ ಜೀವಿತಾಂತ್ಯದ ಕ್ರಿ.ಶ.ಸು. ೧೨೪೭ರ ಸುಮಾರಿಗೆ ಆಂಧ್ರದ ಕನಿಷ್ಠ ಪಕ್ಷ ಎರಡು ಸ್ಥಳಗಳಲ್ಲಿ-ತ್ರಿಪುರಾಂತಕಮ್ ಮತ್ತು ಭಟ್ಟಿಪ್ರೋಲು-ಗೋಳಕಿಮಠ ಪರಂಪರೆ ಬಲವಾಗಿ ಬೇರೂರಿತ್ತು.

ಧರ್ಮಶಿವನ ಉತ್ತರಾಧಿಕಾರಿಯಾದ ವಿಶ್ವೇಶ್ವರಶಿವನ ಕಾಲದಲ್ಲಿ ಆಂಧ್ರದಲ್ಲಿ ಗೋಳಕಿಮಠದ ಪ್ರಭಾವ ಶಿಖರಕ್ಕೇರಿತ್ತು. ಕ್ರಿ.ಶ. ೧೨೪೩ಕ್ಕಾಗಲೇ ಅವನ ಮಗ ಪರಿಪೂರ್ಣಶಿವ ಆಂಧ್ರದಲ್ಲಿದ್ದನೆಂಬ ಸಂಗತಿಯಿಂದ, ಧರ್ಮಶಿವನು ಗೋಳಕಿಮಠದ ಆಂಧ್ರಶಾಖೆಯ ಅಧಿಪತಿಯಾಗಿದ್ದ ಕಾಲಾವಧಿಯಲ್ಲಿ ವಿಶ್ವೇಶ್ವರಶಿವನು ಆಗಮಿಸಿರಬಹುದೆಂಬುದು ಸೂಚಿತವಾಗುವುದು. ತ್ರಿಚನಾಪಳ್ಳಿ ಜಿಲ್ಲೆಯ ತಿರುವಾನಿಕ್ಕ ಊರಿನ ಮಠವೊಂದರ ಪ್ರಧಾನ ಆಚಾರ್ಯನಾಗಿದ್ದ ಜೀಯರ್ ವಿಶ್ವೇಶ್ವರಶಿವಾಚಾರ್ಯ ಎಂಬವನು ಗ್ರಾಮವೊಂದನ್ನು ದತ್ತಿ ಪಡೆದನೆಂದು ತಮಿಳುನಾಡಿನ ಪುದುಕೊಟ್ಟೈ ಶಾಸನ (ರಾಜರಾಜನ ೨೪ನೆಯ ವರ್ಷದ್ದು) ದಲ್ಲಿ ಹೇಳಲಾಗಿದೆ. ಅವನನ್ನು ಮಲ್ಕಾಪುರಮ್ ಶಾಸನದ ಮತ್ತು ಮುಮ್ಮಡಿ ರಾಜರಾಜನ ಆಳ್ವಿಕೆಯ ಕ್ರಿ.ಶ. ೧೨೩೯-೪೦ರ[೩೧] ಶಾಸನದ ವಿಶ್ವೇಶ್ವರಶಿವನೊಂದಿಗೆ ಸಮೀಕರಿಸಲಾಗಿದೆ. ಈ ಗುರುತಿಸುವಿಕೆಯನ್ನು ಸಮರ್ಥಿಸಲು ಶಾಸನದೊಳಗೆ ಯಾವುದೇ ಆಂತರಿಕ ಪ್ರಮಾಣವಿಲ್ಲ. ಆದರೆ, ಚೋಳ ಮತ್ತು ಮಾಳವ ಅರಸರು ವಿಶ್ವೇಶ್ವರಶಿವನ ಶಿಷ್ಯರಾಗಿದ್ದರೆಂದು ಮಲ್ಕಾಪುರಮ್ ಶಾಸನ ಹೇಳುವುದರಿಂದ ಅವನು ಆಂಧ್ರಕ್ಕೆ ಬರುವ ಮುನ್ನ ಕೆಲಕಾಲ ತಮಿಳುನಾಡಿನಲ್ಲಿ ವಾಸವಾಗಿದ್ದನೆಂಬುದನ್ನು ಒಪ್ಪಬೇಕಾಗುತ್ತದೆ. ಮಲ್ಕಾಪುರಮ್ ಶಾಸನದ ಪ್ರಕಾರ, ವಿಶ್ವೇಶ್ವರಶಿವನು ಆಂಧ್ರದ ಮೂಲನಿವಾಸಿಯಾಗಿರದೆ ಗೌಡದ (ಬಂಗಾಲ) ದಕ್ಷಿಣ ರಾಢಾ ಪ್ರದೇಶದಲ್ಲಿರುವ ಪೂರ್ವಗ್ರಾಮದವನಾಗಿದ್ದಾನೆ. ಪ್ರಸ್ತುತ ಶಾಸನ ಈತನ ಹಾಗೂ

ಕ್ರಿಯಾಕಲಾಪಗಳ ಬಗೆಗೆ ಅತ್ಯಂತ ದೊಡ್ಡ ಮಾಹಿತಿಮೂಲವಾಗಿದೆ.

ಆಂಧ್ರದಲ್ಲಿ ವಿಶ್ವೇಶ್ವರಶಿವನ ವಾಸ್ತವ್ಯದ ಬಗೆಗೆ ಪ್ರಥಮ ನೇರ ಆಧಾರ ದೊರೆಯುವುದು ಎರಡು ದಿನಾಂಕಗಳುಳ್ಳ (ಕ್ರಿ.ಶ. ೧೨೫೨ ಮತ್ತು ಕ್ರಿ.ಶ. ೧೨೫೩) ತ್ರಿಪುರಾಂತಕಮ್ ಶಾಸನವೊಂದರಿಂದ (SII X 340). ಅವನನ್ನು "ಶ್ರೀ ಗೋಳ್ಕಿಮಠಸಂತಾನ ಸಂತಾನಕ" (ಗೋಳಕಿಮಠ ಸಂತಾನದ ಸ್ವರ್ಗೀಯವೃಕ್ಷ ಅಂದರೆ ಆ ಪರಂಪರೆಯನ್ನು ವಿಸ್ತಾರ ಮತ್ತು ಬೆಳವಣಿಗೆ ಮಾಡಿದವನು) ಎಂದು ಕರೆದಿರುವುದರಿಂದ, ಆ ಕಾಲಕ್ಕಾಗಲೇ ಅವನು ಆಂಧ್ರ ಗೋಳಕಿಮಠದ ಶಾಖೆಯ ನಾಯಕತ್ವ ವಹಿಸಿಕೊಂಡುದು ಸ್ಪಷ್ಟವಾಗುತ್ತದೆ. ಪರಿಪೂರ್ಣಶಿವನ ಕ್ರಿ.ಶ. ೧೨೫೨ರ ಎರಡು ಶಾಸನಗಳ ಆಧಾರದಿಂದ, ವಿಶ್ವೇಶ್ವರಶಿವನು ಕಾಕತೀಯ ಗಣಪತಿಗೆ ಗುರುವೂ ಆಗಿದ್ದನೆಂದು ತಿಳಿದುಬರುತ್ತದೆ. ಧರ್ಮಶಿವನು ಬಹುಶಃ ಕ್ರಿ.ಶ. ೧೨೪೭ ಮತ್ತು ಕ್ರಿ.ಶ. ೧೨೫೨ರ ಮಧ್ಯೆ ಯಾವಾಗಲೋ ತೀರಿಕೊಂಡಾಗ, ವಿಶ್ವೇಶ್ವರಶಿವನು ಎರಡೂ ಹುದ್ದೆ (ರಾಜಗುರುತ್ವ, ಮಠಾಧೀಶತ್ವ)ಗಳನ್ನು ಏಕಕಾಲಕ್ಕೆ ವಹಿಸಿಕೊಂಡಂತೆ ತೋರುತ್ತದೆ.

ತ್ರಿಪುರಾಂತಕಮ್ ದೇವಾಲಯ ಸಂಕೀರ್ಣದೊಂದಿಗಿನ ಗೋಳಕಿಮಠದ ಸಂಬಂಧ ವಿಷಯವಾಗಿ, ವಿಶ್ವೇಶ್ವರಶಿವನು ತನ್ನ ಗುರುವಿನಂತೆಯೇ ಗಾಢ ಹೆಜ್ಜೆ ಹಾಕಿದನು. ಮೇಲ್ಕಂಡ ಶಾಸನದ ಪ್ರಕಾರ ಒಂದು ಉದ್ಯಾನ, ಎರಡು ಉತ್ಸವ ಮತ್ತು ಅವನ ಹೆಸರಿನಲ್ಲಿ ನಡೆಯುವ ಪೂಜಾ (ಸಂಧ್ಯಾ) ಸಮಯದ ಎರಡು ದೈನಂದಿಕ ನೈವೇದ್ಯಗಳಿಗೆ ಏರ್ಪಾಡು ಮಾಡಿದನು. ಅದೂ ಅಲ್ಲದೆ, ದೇವಾಲಯದ ಬಳಿಯ ಅರಣ್ಯ ಭೂಪ್ರದೇಶವನ್ನು ಕಡಿದು, ತೆರವು ಮಾಡಲು ವಿಶ್ವೇಶ್ವರಶಿವನು ಕಾರಣಕರ್ತನಾದನು. ಅಲ್ಲಿ ಅವನು ಒಂದು ಗ್ರಾಮವನ್ನು ನಿರ್ಮಿಸಿದುದಲ್ಲದೆ ಕೆರೆಯನ್ನೂ ಅಗೆಯಿಸಿದನು. ಇಂದು ತ್ರಿಪುರಾಂತಕಮ್‌ದಲ್ಲಿರುವ ಗುಡಿಯ ವಿಮಾನವನ್ನು, ಪರಂಪರೆಯ ನಾಲ್ಕನೆಯ ಸದಸ್ಯನೂ ವಿಶ್ವೇಶ್ವರಶಿವನ ಶಿಷ್ಯನೂ ಆಗಿದ್ದ ಶಾಂತಶಿವನು ಎರಡು ವರ್ಷ ತರುವಾಯದಲ್ಲಿ ಕಟ್ಟಿಸಿದನು (SIIX. 345). ಈ ಕಾಲದಿಂದ ಮುಂದಕ್ಕೆ ಶಾಸನಗಳಲ್ಲಿ ತ್ರಿಪುರಾಂತಕಮ್‌ದೊಂದಿಗೆ ಸಂಬಂಧ ಹೊಂದಿದವನೆಂದರೆ ಈ ಶಾಂತಶಿವನು ಮಾತ್ರ. ಆದಾಗ್ಯೂ, ವಿಶ್ವೇಶ್ವರಶಿವನು ಪರಂಪರೆಯ ಒಟ್ಟು ಆಧಿಪತ್ಯವನ್ನು ತನ್ನ ಕೈಯಲ್ಲಿಯೇ ಹಿಡಿದುಕೊಂಡಿದ್ದನೆಂಬುದನ್ನು "ತ್ರಿಲಕ್ಷ ಗ್ರಾಮ ಗೋಳಕಿಮಹಾಮಠ ಸಾಮ್ರಾಜ್ಯ ಪಟ್ಟಬದ್ಧ" ಎಂಬ ಉಪಾಧಿ ವ್ಯಕ್ತಪಡಿಸುತ್ತದೆ. ಇದನ್ನು ಸ್ಥೂಲವಾಗಿ "ಮೂರು ಲಕ್ಷ ಗ್ರಾಮಗಳ ಮಹಾಗೋಳಕಿಮಠದ ಸಾಮ್ರಾಜ್ಯದ ಮುಕುಟವನ್ನು ಧರಿಸಿದವ" ಎಂದು ಅನುವಾದಿಸಬಹುದು. ಶಾಂತಶಿವನ ಎರಡು ಶಾಸನಗಳಲ್ಲಿ (AIR-CP. 142 ಮತ್ತು SIIX 400) ಈ ಉಪಾಧಿಯನ್ನು ಅವನಿಗೆ (ವಿಶ್ವೇಶ್ವರಶಿವನಿಗೆ) ಹಚ್ಚಲಾಗಿದೆ.

ತಾನು ರಾಜಗುರು ಆದ ತರುವಾಯದ ದಶಕಗಳಲ್ಲಿ ವಿಶ್ವೇಶ್ವರ ಶಿವನು ಶಾಖಾಮಠಗಳನ್ನು ಸ್ಥಾಪಿಸುವಲ್ಲಿ ಮತ್ತು ದೇವಾಲಯಗಳನ್ನು ಕಟ್ಟುವಲ್ಲಿ ಸಕ್ರಿಯನಾಗಿದ್ದನು. ಮಲ್ಕಾಪುರಮ್ ಶಾಸನದಲ್ಲಿ ದಾಖಲಾಗಿರುವ ಅವನ ಸಾಧನೆಗಳ ಪಟ್ಟಿಯಲ್ಲಿ ಗುಂಟೂರು

ಜಿಲ್ಲೆಯ ಮಲ್ಕಾಪುರಮ್‌ನಲ್ಲಿ ಸ್ಥಾಪಿಸಿದ ಮಠವಲ್ಲದೆ ನಾಲ್ಗೊಂಡ ಜಿಲ್ಲೆಯ ಈಲೇಶ್ವರಮ್, ಕರೀಮನಗರ ಜಿಲ್ಲೆಯಲ್ಲಿರುವ ಕಾಲೇಶ್ವರಮ್ ಮತ್ತು ಮಂತ್ರಕೂಟ ಮಠಗಳ ಸ್ಥಾಪನೆಯೂ ಸೇರ್ಪಡೆಗೊಂಡಿವೆ. ಮಲ್ಕಾಪುರಮ್‌ನಲ್ಲಿಯಂತೆಯೆ ಮಂತ್ರಕೂಟ, ಚಂದ್ರವಳ್ಳಿ, ಕೊಮ್ಮುಗ್ರಾಮ, ನಿವೃತ್ತಿ (?) ಮತ್ತು ಉತ್ತರ ಸೋಮಶಿಲಾಗಳಲ್ಲಿಯೂ ಇವನು ತನ್ನ ಹೆಸರಿನ ಲಿಂಗಗಳನ್ನು ಪ್ರತಿಷ್ಠಾಪಿಸಿದನೆಂದು ಹೇಳಲಾಗಿದೆ. ಈ ಪಟ್ಟಿಯ ಸತ್ಯತೆಯನ್ನು ಪರಶಿವ ಹೊರಡಿಸಿದ ಕಾಲೇಶ್ವರಮ್ ಶಾಸನ (ARIE 89 of 1958-59 IAP KN 32) ಕರೀಮನಗರ ಜಿಲ್ಲೆಯ ಖಮ್ಮಪಲ್ಲೆಯ ಶಾಸನ (ARIE 145 of 1954-55) ಆಂಶಿಕವಾಗಿಯಾದರೂ ದೃಢಪಡಿಸುತ್ತವೆ. ವಿಶ್ವೇಶ್ವರಶಿವನ ಗುರುವಿನ ಗುರುವೂ ಕಲಚೂರಿ ಅರಸರಾದ ಜಯಸಿಂಹ ಮತ್ತು ವಿಜಯಸಿಂಹರ ರಾಜಗುರುವೂ ಆಗಿದ್ದ ವಿಮಲೇಶ್ವರನ ಹೆಸರಿನ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಯಿತೆಂಬುದು ಕಾಲೇಶ್ವರಮ್ ಶಾಸನದಿಂದ[೩೨] ತಿಳಿದುಬರುತ್ತದೆ. ತನ್ನ ಹೆಸರಿನ ಆರು ಲಿಂಗಗಳಲ್ಲದೆ ಕನಿಷ್ಠ ಪಕ್ಷ ಒಟ್ಟು ಏಳು ದೇವಾಲಯಗಳು ವಿಶ್ವೇಶ್ವರಶಿವನ ಏಳು ನಿರ್ಮಿತಿಗಳೆಂದು ತಿಳಿದು ಬರುತ್ತದೆ. ಗಣಪತಿಯ ರಾಜಗುರು ವಿಶ್ವೇಶ್ವರ ಶಿವನ ಹೆಸರಿನ ಲಿಂಗವನ್ನೊಳಗೊಂಡ ಇನ್ನೂ ಒಂದು ದೇವಾಲಯವನ್ನು ಕರ್ನೂಲು ಜಿಲ್ಲೆಯ ಸಿದ್ಧೇಶ್ವರಮ್‌ನಲ್ಲಿದ್ದ ಕಾಕತೀಯರ ಮಾಂಡಲಿಕನು ಕಟ್ಟಿಸಿದ್ದನೆಂದೂ ತಿಳಿದುಬರುತ್ತದೆ. ಇವೆಲ್ಲ ನಿರ್ಮಾಣಗಳು ಕ್ರಿ.ಶ. ೧೨೫೨ ಮತ್ತು ಗಣಪತಿಯ ಆಳ್ವಿಕೆಯ ಅಂತ್ಯಕಾಲವಾಗಿರುವ ಕ್ರಿ.ಶ. ೧೨೬೨ರ ಮಧ್ಯದ ಕಾಲಾವಧಿಯಲ್ಲಿ ನಡೆದವು.[೩೩] ಗೋಳಕಿಮಠದ ಪ್ರತಿಷ್ಠೆ ಮತ್ತು ವಿಶ್ವೇಶ್ವರಶಿವನ ರಾಜಗುರುತ್ವಗಳು ಅವನು ದತ್ತಿಗಳಿಗೆ ಸತ್ಪಾತ್ರನೆಂದು ವ್ಯಾಪಕವಾಗಿ ಗೌರವಿಸಲ್ಪಡಲು ಕಾರಣೀಭೂತವಾಗಿರಬೇಕು. ಮೇಲೆ ಪ್ರಸ್ತಾಪಿಸಿದ ಕಟ್ಟಡ ನಿರ್ಮಾಣ ಕೆಲಸಗಳನ್ನು ಕೈಗೆತ್ತಿಕೊಳ್ಳಲು ಸಾಕಷ್ಟು ಸಂಪನ್ಮೂಲಗಳನ್ನು ಹೇಗೆ ಕ್ರೋಢೀಕರಿಸಿದನೆಂಬುದಕ್ಕೆ ಮೇಲ್ಕಾಣಿಸಿದ ಅಂಶ ಅಂದರೆ ಮಠದ ಪ್ರತಿಷ್ಠೆ ಮತ್ತು ವೈಯಕ್ತಿಕ ಹಿರಿಮೆಗಳೇ ವಿವರಣೆ ನೀಡಬಲ್ಲವು. ಬಹಳಷ್ಟು ಮಠಗಳಿಗೆ ಮತ್ತು ದೇವಾಲಯಗಳಿಗೆ ಗ್ರಾಮದತ್ತಿ ನೀಡಿದ್ದನೆಂಬ ಮತ್ತು ಶಿವಪುರಿಗಳನ್ನು ದತ್ತು ಮೂಲಕ ಪೋಷಿಸಿದನೆಂಬ ಹೇಳಿಕೆಗಳು ಇದಕ್ಕೆ ಪುಷ್ಟಿ ಒದಗಿಸುತ್ತವೆ.[೩೪]

ಅವನ ಪ್ರಸಿದ್ಧಿ ಜನಮಾನಸದಲ್ಲಿ ಮತ್ತು ಕಾಕತೀಯ ರಾಜವಂಶದ ಎರಡು ಸಾಂಪ್ರದಾಯಿಕ ತೆಲುಗು ಸಿದ್ಧೇಶ್ವರ ಚರಿತ್ರಮು ಮತ್ತು ಪ್ರತಾಪರುದ್ರ ಚರಿತ್ರಮು ಕೃತಿಗಳಲ್ಲಿ[೩೫] ಜೀವಂತವಾಗುಳಿಯಿತು. ಇವುಗಳಲ್ಲಿ ಅವನು ಕಾಕತೀಯ ಅರಸರಾದ ಗಣಪತಿ, ರುದ್ರಮದೇವಿ ಮತ್ತು ಪ್ರತಾಪರುದ್ರರ ಗುರು ಶಿವದೇವಯ್ಯನಾಗಿ ಕಾಣಿಸಿಕೊಂಡಿದ್ದಾನೆ. ಅತಿ ಮಹತ್ವದ ಮಂತ್ರಿಯೂ ಆಗಿದ್ದುದರಿಂದ ಇವನ ಸಲಹೆಯನ್ನು ಯಾವಾಗಲೂ ಕೋರಲಾಗುತ್ತಿತ್ತು. ಇಷ್ಟೇ ಏಕೆ ನಿಜಕ್ಕೂ ಅವನು ಮಾನವರೂಪಿ ದೇವತೆಯಾಗಿದ್ದನೆಂದು[೩೬] ಆ ಕಥೆಗಳು ಹೇಳುತ್ತವೆ. ಕಾಕತೀಯ ವಂಶದ ಪತನಾನಂತರ ಶ್ರೀಶೈಲಮ್‌ದತ್ತ ನಡೆದ ಈ ಶಿವದೇವಯ್ಯನ ಬಗೆಗೆ ಮುಂದೆ ಏನೂ ತಿಳಿದು ಬರುವುದಿಲ್ಲ. ಗೋಳಕಿಮಠ ಪರಂಪರೆಯ ಹಲವಾರು

ಗುರುಗಳನ್ನು ಈ ಒಬ್ಬ ವ್ಯಕ್ತಿ ನೆನಪಿಗೆ ತರುತ್ತಾನೆ. ವ್ಹಿ. ಯಶೋದದೇವಿ ಅಭಿಪ್ರಾಯದ ಪ್ರಕಾರ, ವೆಲಮರೆಡ್ಡಿ ಶಾಖೆಯೊಂದರ ಉತ್ತರಕಾಲೀನ ವೃತ್ತಾಂತವಾಗಿರುವ "ವೆಲುಪೋಟಿವಾರಿ ವಂಶಚರಿತ್ರ"ದಲ್ಲಿ ಈ ವಿಶ್ವೇಶ್ವರಶಿವದೇಶಿಕನು ರಾಣಿ ರುದ್ರಮಳ ಮಂತ್ರಿಯಾಗಿದ್ದನೆಂದು ಉಲ್ಲೇಖಿಸಲಾಗಿದೆ.[೩೭]

ವಿಶ್ವೇಶ್ವರಶಿವನ ಕೊನೆಯ ನಿರ್ದಿಷ್ಟ ತೇದಿ ಕ್ರಿ.ಶ. ೧೨೬೨ (SIIX 399) ಆಗಿರುವುದಾದರೂ ಇದರ ನಂತರವೂ ಅವನು ಜೀವಿಸಿರಬಹುದು. ಏಕೆಂದರೆ, ಶಾಂತಶಿವನ ಶಾಸನಗಳು ಅವನು ರಾಜಗುರುವಿನ (ವಿಶ್ವೇಶ್ವರ ಶಿವನ) ಆಧೀನನಾಗಿದ್ದನೆಂದು ಹೇಳುವುದನ್ನು ಮುಂದುವರಿಸುತ್ತವೆ (ಶ್ರೀಮದ್‌ರಾಜಗುರುಚರಣ ಸರಸೀರುಹ ಭೂಷಿತಮಸ್ತಕ). ಶಾಂತಶಿವನ ವರ್ಣನೆಯಲ್ಲಿ ಬರುವ ಇನ್ನೊಂದು ಪದಪುಂಜವು (ಶ್ರೀ ತ್ರಿಪುರಾಂತಕದೇವ ದಿವ್ಯಶ್ರೀಪಾದ ಪದ್ಮರಾಧಕುಲೈನ) ತ್ರಿಪುರಾಂತಕಮ್‌ದ ಶಿವ ಅವನ ಇಷ್ಟದೇವತೆಯಾಗಿದ್ದನೆಂದು ಸೂಚಿಸುತ್ತದೆ. ಮೇಲೆ ಹೇಳಿರುವಂತೆ, ಕ್ರಿ.ಶ. ೧೨೫೪ರಲ್ಲಿ ಶಾಂತಶಿವನು ಆ ದೇವಾಲಯಕ್ಕೆ ವಿಮಾನವನ್ನು ಕಟ್ಟಿಸಿದ. ಅದೇ ವರ್ಷ ಇಂದಿನ ಪ್ರಕಾಶಮ್ ಜಿಲ್ಲೆಯ ದರ್ಶಿ ತಾಲೂಕಿನ ಎರಡು ಶಾಸನಗಳು (NDI Darsi 25 & 28) ತ್ರಿಪುರಾಂತಕಮ್‌ದಲ್ಲಿ ದೇವತೆಯನ್ನು ಸ್ಥಾಪಿಸಲು ಶಾಂತಶಿವನಿಗೆ ಒಂದು ಗ್ರಾಮವನ್ನು ದತ್ತಿನೀಡಿದುದನ್ನು ದಾಖಲಿಸುತ್ತವೆ.[೩೮] ದರ್ಶಿಯ ಇನ್ನೊಂದು ದಿನಾಂಕರಹಿತ ಶಾಸನ (NDI Darsi 74) ಶಾಂತಶಿವನ ದೇಖರೇಖಿಯಲ್ಲಿದ್ದ ತ್ರಿಪುರಾಂತಕಮ್‌ದ ಗಂಗೇಶ್ವರ ದೇವತೆಗೆ ಒಂದು ಗ್ರಾಮವನ್ನು ದತ್ತಿಯಿತ್ತುದನ್ನು ದಾಖಲಿಸುತ್ತದೆ. ಕೊನೆಯ ಒಂದು ಶಾಸನ (SII X 400) ತ್ರಿಪುರಾಂತಕಮ್‌ದೊಂದಿಗಿನ ಅವನ ಸಂಬಂಧವನ್ನು ಉಲ್ಲೇಖಿಸುತ್ತದೆ. ಅಲ್ಲಿ ನೀಡಲಾದ ಒಂದು ನಿವೇಶನ ಅವನು ಅಗೆಯಿಸಿದ ಕೆರೆಗೆ ಹತ್ತಿಕೊಂಡಿರುವುದಾಗಿ ಹೇಳಲಾಗಿದೆ. ಆದುದರಿಂದ, ವಿಶ್ವೇಶ್ವರನ ಈ ಶಿಷ್ಯನು ದತ್ತಿಗಳನ್ನು ಪಡೆಯುವಲ್ಲಿ ಗುರುವನ್ನು ಮೀರಿಸಿದ್ದ. ಕ್ರಿ.ಶ. ೧೨೫೪ ಮತ್ತು ಅವನಿಗೆ ಸಂಬಂಧಿಸಿದ ಕೊನೆಯ ದಿನಾಂಕವಾದ ಸು. ಕ್ರಿ.ಶ. ೧೨೬೦ರ ಮಧ್ಯೆ ಅವನು ಆ ದೇವಾಲಯ ಸಂಕೀರ್ಣದ ಉಸ್ತುವಾರಿಯ ಪರಮಾಧಿಕಾರ ಆಗಿರುವ ಸಾಧ್ಯತೆಯಿದೆ. ಆ ಕಾಲಕ್ಕೆ ಚಿಕ್ಕ ದೊರೆಯೊಬ್ಬ ಅವನಿಗೆ ಇನ್ನೊಂದು ಗ್ರಾಮವನ್ನು ದತ್ತಿ ನೀಡಿದ (APRE 273 of 1966-ARIE 26 of 1970).

ಶಾಸನದ ಆಧಾರದಿಂದ ಶಾಂತಶಿವನಿಗೆ ಸಂಬಂಧಿಸಿದ ಇನ್ನೂ ಒಂದು ಮಹತ್ವದ ಅಂಶ ಹೀಗೆ ಹೊರಹೊಮ್ಮುವುದು: ಬಹುಶಃ ತ್ರಿಪುರಾಂತಕಮ್‌ದಲ್ಲಿರುವ ಗೋಳಕಿಮಠದ ಶಾಖೆಯ ಅಧಿಪತಿಯಾಗಿರುವುದಲ್ಲದೆ ಶಾಂತಶೀವನು ಶ್ರೀಶೈಲಮ್‌ದಲ್ಲಿರುವ ಅಭಿನವ ಗೋಳಕಿಮಠ ಹೆಸರಿನ ಮಠವೊಂದರ ಅಧಿಪತಿಯೂ ಆಗಿದ್ದನು. ಈ ಮಾಹಿತಿಯನ್ನು ಒಳಗೊಂಡಿರುವ ಎರಡು ಶಾಸನಗಳನ್ನು (IAP-CP, 140 and 142) ಕಾಕತೀಯರ ಅಧೀನೋದ್ಯೋಗಿಯಾಗಿದ್ದ ಕಾಯಸ್ಥ ಜನ್ನಿಗದೇವನು ಹೊರಡಿಸಿದ್ದನು. ಶಿವ (ಶೈವ)ಲಿಂಗಮಠಕ್ಕೆ ಸೇರಿದ್ದ ವಿದ್ಯಾಮಂಟಪದಲ್ಲಿ ಕಲಿಯಬಂದವರ ಅನುಕೂಲಕ್ಕಾಗಿ ಇವನು

ಕಡಪಾ ಜಿಲ್ಲೆಯ ಎರಡು ಗ್ರಾಮಗಳನ್ನು ಶಾಂತಶಿವನಿಗೆ ದತ್ತಿ ಕೊಟ್ಟನೆಂದು ಈ ಶಾಸನಗಳಲ್ಲಿ ಹೇಳಲಾಗಿದೆ.[೪೦] ಇದೇ ಉದ್ದೇಶಕ್ಕಾಗಿ ಜನ್ನಿಗದೇವನಿಂದ ಶಾಂತಶಿವನಿಗೆ ಸಂದ ಅಧಿಕ ಭೂದತ್ತಿಗಳು ಇನ್ನೆರಡು ಶಾಸನಗಳಲ್ಲಿ ದಾಖಲಾಗಿರುವ ಸಾಧ್ಯತೆಯಿದೆ. ಅವೆರಡೂ ಬಹಳ ಭಗ್ನಗೊಂಡಿವೆ. ಅವುಗಳಲ್ಲೊಂದು ಮೆಡಿಕುರ್ತಿ (ಚಿತ್ತೂರ್ ಜಿಲ್ಲೆ)ನಲ್ಲಿದೆ (ARIE 4 of 1955-56)[೪೧] ಇನ್ನೊಂದು ಗುಂಟೂರು ಜಿಲ್ಲೆಯ ಅಲುಗುರಾಜುಪಲ್ಲೆಯಲ್ಲಿದೆ (ARIE 289 of 1930-31)[೪೨]. ಮಠದ ಪ್ರಮುಖ ಕಾರ್ಯವಾದ ವಿದ್ಯಾಬೋಧನೆಯ ಒತ್ತನ್ನು ಈ ಶಾಸನಗಳು ತೋರ್ಪಡಿಸುತ್ತವೆ. ಮಲ್ಕಾಪುರಮ್‌ದಲ್ಲಿ ಕಲಿಸುತ್ತಿದ್ದ ವಿಷಯಗಳು ವೇದ ಮತ್ತು ಶೈವ ವಿಷಯಗಳ ವರೆಗೆ ವ್ಯಾಪಿಸಿದ್ದವು. ವಿದ್ಯಾರ್ಥಿಗಳ ಎಲ್ಲ ಅಗತ್ಯಗಳನ್ನು ಮತ್ತು ಈ ಸಂಸ್ಥೆಗಳಿಗೆ ಆಗಾಗ ಬರುತ್ತಿದ್ದ ಸಂದರ್ಶಕರ ಅಗತ್ಯಗಳನ್ನು ಮಠದ ಸಿಬ್ಬಂದಿ ಪೂರೈಸುತ್ತಿದ್ದರು. ಈ ಸಿಬ್ಬಂದಿಗಳಲ್ಲಿ ಅಡಿಗೆಯವರು, ನೀರು ತರುವವರು, ತೋಟಗಾರರು, ಕಾವಲುಗಾರರು ಮತ್ತು ಇತರರು ಇದ್ದರು.[೪೩] ಈ ಮಠಗಳು ವಿದ್ಯಾಮಂಟಪಗಳಲ್ಲದೆ ಸತ್ರ (ಛತ್ರ)ಗಳನ್ನೂ ನಡೆಸುತ್ತಿದ್ದವು. ಅವುಗಳಲ್ಲಿ ಆಯಾ ಪುಣ್ಯಕ್ಷೇತ್ರಗಳ ನಿವಾಸಿಗಳಿಗೆ ಮತ್ತು ತೀರ್ಥಯಾತ್ರಿಗಳಿಗೆ ಆಹಾರ ನೀಡಲಾಗುತ್ತಿತ್ತು.[೪೪]

ಜನ್ನಿಗದೇವನಿಂದ ದತ್ತಿ ಪಡೆದ ಶೈವಮಠ ಇದ್ದುದೆಲ್ಲಿ? ಈ ಶಾಸನಗಳು ಶ್ರೀ ಪರ್ವತ (ಶ್ರೀಶೈಲಮ್)ದಲ್ಲಿರುವ ಅಭಿನವ ಗೋಳಕಿಮಠದೊಂದಿಗೆ ಶಾಂತಶಿವ ಹೊಂದಿದ್ದ ಸಂಬಂಧವನ್ನು ಪ್ರಸ್ತಾಪಿಸುವುದರಿಂದ ಈಗ ಚರ್ಚಿಸಲಾಗುತ್ತಿರುವ ವಿದ್ಯಾಮಂಟಪವು ಈ (ಶ್ರೀಶೈಲದಲ್ಲಿದ್ದ ಅಭಿನವ ಗೋಳಕಿ) ಮಠಕ್ಕೆ ಸೇರಿದ್ದೆಂದು ಊಹಿಸಬಹುದು.[೪೫] ಇನ್ನೊಂದು ಸಾಧ್ಯತೆಯೆಂದರೆ ಈ ಮಠವು ತ್ರಿಪುರಾಂತಕಮ್‌ದಲ್ಲಿದ್ದಿತೆಂಬುದು. ಸು. ಕ್ರಿ.ಶ. ೧೧೪೭ರಲ್ಲಿ ಧರ್ಮಶಿವ ತ್ರಿಪುರಾಂತಕಮ್‌ನಲ್ಲಿ ಆರಂಭಿಸಿದ್ದ ಗೋಳಕಿಮಠದ ಅಂಗಸಂಸ್ಥೆಗೆ ನಾಮನಿರ್ದೇಶನವಿಲ್ಲ. ಆದರೆ, ಅಲ್ಲಿಯ ದೇವಾಲಯದಲ್ಲಿರುವ ದಿನಾಂಕರಹಿತ ಶಾಸನವೊಂದು (SIIX 388) ಶುದ್ಧಶೈವಮಠದ ಸಿಬ್ಬಂದಿಗಾಗಿ ಅನೇಕ ಜೀವನಾಧಾರ ದತ್ತಿಗಳನ್ನು (ವೃತ್ತಿಗಳನ್ನು) ದಾಖಲಿಸುತ್ತದೆ. ಈ ತ್ರಿಪುರಾಂತಕಮ್ ಶಾಸನವು ಗೋಳಕಿಮಠದ ಶಾಖೆಗೆ ಸೇರಿದ್ದೆಂದು ನಿರ್ವಿವಾದವಾಗಿ ಹೇಳಬಹುದು. ಒಟ್ಟಿನಲ್ಲಿ, ಆಂಧ್ರದಲ್ಲಿ ಮೂಲ ಗೋಳಕಿಮಠದ ಕನಿಷ್ಠ ಆರು ಅಂಗಸಂಸ್ಥೆಗಳು ಇದ್ದವು:ತ್ರಿಪುರಾಂತಕಮ್, ಶ್ರೀಶೈಲಮ್, ಮಲ್ಕಾಪುರಮ್, ಏಲೇಶ್ವರಮ್, ಕಾಲೇಶ್ವರಮ್ ಮತ್ತು ಮಂತ್ರಕೂಳ.[೪೬]

ಶಾಂತಶಿವನು ಆಚಾರ್ಯನಾಗಿದ್ದ ಕಾಲಾವಧಿಯ ತರುವಾಯ ಶ್ರೀಶೈಲಮ್ ಮತ್ತು ತ್ರಿಪುರಾಂತಕಮ್‌ದಲ್ಲಿದ್ದ ಮಠಗಳ ಹಣೆಬರಹ ಏನಾಯಿತೆಂದು ತಿಳಿಯದು. ತ್ರಿಪುರಾಂತಕಮ್‌ದಲ್ಲಿಯ ತರುವಾಯದ ಶಾಸನಗಳಲ್ಲಿ[೪೭] ಕಂಡುಬರುವ ತ್ರ್ಯಂಬಕಶಿವ ಮತ್ತು ಚಂದ್ರಭೂಷಣ ಶಿವ—ಇವರು ಗೋಳಕಿಮಠ ಪರಂಪರೆಯೊಂದಿಗೆ[೪೮] ಸಂಬಂಧ ಹೊಂದಿದ್ದರೆಂದು ಸೂಚಿಸಲಾಗಿದೆ. ಇದು ನಿಜವಾಗಿರಬಹುದಾದರೂ ಗೋಳಕಿಮಠದಲ್ಲಿ ಈ ಮೊದಲು ಜರುಗಿದ ತೀವ್ರ ಕಾರ್ಯಕಲಾಪಗಳನ್ನು ನೋಡಿದರೆ, ಈ ವ್ಯಕ್ತಿಗಳ

ಧರ್ಮಾಭಿಮಾನ, ಸಾಂಸ್ಥಿಕ ಮತ್ತು ಗುರು-ಶಿಷ್ಯ ಸಂಬಂಧ—ಇವುಗಳ ಬಗೆಗಿನ ಆಧಾರದ ಅಭಾವದಲ್ಲಿ ಅದು ಊಹೆಯಾಗಿರಲು ಮಾತ್ರ ಸಾಧ್ಯ.

ಕ್ರಿ.ಶ. ೧೩೧೨ಕ್ಕಿಂತ ಮೊದಲು ಶ್ರೀಶೈಲದಲ್ಲಿ ಯಾವುದೇ ಶಾಸನವಿಲ್ಲವೆಂಬ ಸಂಗತಿಯಿಂದಾಗಿ ಅಲ್ಲಿಯ ಸ್ಥಿತಿ ತ್ರಿಪುರಾಂತಕಮ್‌ಕ್ಕಿಂತಲೂ ಅಸ್ಪಷ್ಟವಾಗಿದೆ. ಶ್ರೀಶೈಲಮ್‌ದಲ್ಲಿ ಕ್ರಿ.ಶ. ೧೨೬೦ರಷ್ಟೊತ್ತಿಗೆ ಅಭಿನವ ಗೋಳಕಿಮಠ, ಸು. ಕ್ರಿ.ಶ. ೧೨೪೯ರಲ್ಲಿ ಕಾಕತೀಯ ಅರಸ ಗಣಪತಿ ಸ್ಥಾಪಿಸಿದ ಭೃಂಗಿಮಠ,[೪೯] ಬಹುಶಃ ಕಲ್ಲುಮಠ ಎಂದೂ ಕರೆಯುತ್ತಿದ್ದ ಕಾಳಾಮುಖದ ಶಿಲಾಮಠ,[೫೦] (ಕ್ರಿ.ಶ. ೧೦೯೦) ಮತ್ತು ಅರ್ಸಿ ಹಾಗೂ ಅರಸ ಎಂದೂ ಕರೆಯಲಾಗುತ್ತಿದ್ದ ಅರಸುಮಠ ೫೧(ಕ್ರಿ.ಶ. ೧೨೬೫) ಇದ್ದವೆಂದು ಬೇರೆಡೆ ದೊರೆತ ಶಾಸನಗಳಿಂದ ತಿಳಿದುಬರುತ್ತದೆ. ಶ್ರೀಶೈಲಮ್‌ದಲ್ಲಿಯ ಕ್ರಿ.ಶ. ೧೩೧೨, ಕ್ರಿ.ಶ. ೧೩೧೩ ಮತ್ತು ಕ್ರಿ.ಶ. ೧೩೧೫ರ ಶಾಸನಗಳು ಕಲ್ಲುಮಠ, ಅರಸುಮಠ ಮತ್ತು ಗಣಮಠ[೫೨]ಗಳನ್ನು ಉಲ್ಲೇಖಿಸುತ್ತವೆ. ಈ ಮೂರು ಮಠಗಳಲ್ಲಿ ಅರಸುಮಠ ಅತ್ಯಂತ ಮಹತ್ವದ್ದಾಗಿತ್ತೆಂದು ತೋರುತ್ತದೆ. ಮತ್ತು ಅದರ ನಿಯಂತ್ರಣದಲ್ಲಿದ್ದ ಗ್ರಾಮಗಳ ದೀರ್ಘ ಪಟ್ಟಿಯನ್ನು SIIX. 504ರಲ್ಲಿ ಕೊಟ್ಟಿದೆ. ಆದರೆ ಆ ಗ್ರಾಮಗಳಲ್ಲಿ ಯಾವುದೂ ಗೋಳಕಿಮಠದ ಪರಂಪರೆಯ ಸದಸ್ಯನಿಗೆ ದತ್ತಿ ನೀಡಿದ್ದೆಂದು, ಗೊತ್ತಿರುವ ಯಾವುದೇ ಗ್ರಾಮದೊಂದಿಗೆ ಹೋಲುವುದಿಲ್ಲ. ಮೇಲಾಗಿ, ಅರಸುಮಠವನ್ನು ಕ್ರಿ.ಶ. ೧೨೬೫ರ ಶಾಸನದಲ್ಲಿ ಪ್ರಥಮತಃ ಉಲ್ಲೇಖಿಸಲಾಗಿದೆ. ಅದೇ ಸುಮಾರಿಗೆ ಶಾಂತಶಿವ ಅಧಿಪತಿಯಾಗಿದ್ದ ಅಭಿನವ ಗೋಳಕಿಮಠವು ಬೇರೆಡೆ ಉಲ್ಲೇಖವಾಗಿರುವುದು ಕಂಡುಬರುತ್ತದೆ. ಆದ್ದರಿಂದ, ಕ್ರಿ.ಶ. ೧೩೧೩ರ ಶಾಸನದಲ್ಲಿ ಹೇಳಿರುವ ಅರಸುಮಠ ಮತ್ತು ಅದರ ಆಚಾರ್ಯ ಈಶ್ವರಶಿವ, ಗೋಳಕಿಮಠದೊಂದಿಗೆ ಸಂಬಂಧ ಹೊಂದಿದ್ದರೆಂಬ ಕೆಲವು ವಿದ್ವಾಂಸರ ಗ್ರಹಿಕೆಗೆ ಈ ಪ್ರಮಾಣ ವ್ಯತಿರಿಕ್ತವಾಗಿದೆ.

ವಿಶ್ವೇಶ್ವರಶಿವನು ಪರಂಪರೆಯ ಮುಖ್ಯಸ್ಥನಾಗಿದ್ದಾಗಲೇ ಇನ್ನಿಬ್ಬರು ಸದಸ್ಯರಾದ ಸದಾಶಿವ ಮತ್ತು ವಿದ್ಯಾಶಿವರ ಬಗೆಗೆ ಶಾಸನಗಳು ಹೀಗೆ ದೊರೆಯುತ್ತವೆ: ಕ್ರಿ.ಶ. ೧೨೫೮ರ ಶಾಸನದಲ್ಲಿ (ARIE 301 of 1930-31) ಸದಾಶಿವನು ಗುಂಟೂರು ಜಿಲ್ಲೆಯ ಕಂಭಪಾಡುವಿನಲ್ಲಿರುವ ದೇವಾಲಯದ ಸ್ಥಾನಪತಿಯಾಗಿದ್ದನೆಂದು ಉಲ್ಲೇಖಿಸಲಾಗಿದೆ. ಕಾಕತೀಯ ಗಣಪತಿಯ ಆಳ್ವಿಕೆಯಲ್ಲಿ ಸಂಗಮೇಶ್ವರ ಮತ್ತು ಭಾಸ್ಕರಕ್ಷೇತ್ರಗಳ ಸ್ಥಾನಪತಿಯಾಗಿದ್ದ ವಿದ್ಯಾಶಿವನೊಂದಿಗೆ ಸಂಬಂಧ ಹೊಂದಿದ್ದ ಪೋಚಿರಾಜು ಎಂಬವನು ವಿಶ್ವೇಶ್ವರಶಿವನ ಹೆಸರಿನಲ್ಲಿ ಹೊಸದಾಗಿ ಸ್ಥಾಪಿತವಾಗಿದ್ದ ದೇವತೆಗೆ ದತ್ತಿ ನೀಡಿದ (ARIE 40 of 1942-43). ಗೋಳಕಿಮಠದೊಂದಿಗೆ ವಿದ್ಯಾಶಿವನ ಈ ತೆಳುವಾದ ಸಂಬಂಧವನ್ನು (ಅಂದರೆ ಆಂಧ್ರಶಾಖೆಯ ಮುಖ್ಯಗುರುವಿನ ಹೆಸರಿಟ್ಟು, ಲಿಂಗಕ್ಕೆ ನೀಡಿದ ನೆರವನ್ನು) ಮಲ್ಕಾಪುರಮ್‌ದ ತರುವಾಯದ ಎರಡು ಶಾಸನಗಳೂ ಪುಷ್ಟೀಕರಿಸುತ್ತವೆ.

ವಿಶ್ವೇಶ್ವರಶಿವನು ಈ ಹಿಂದೆ ಸ್ಥಾಪಿಸಿದ್ದ ವಿಶ್ವನಾಥ ದೇವಾಲಯದಲ್ಲಿದ್ದ ನರ್ತಕಿಯರಿಗೆ, ಕಸಬುದಾರರಿಗೆ ಮತ್ತು ಉಪ್ಪಾರರಿಗೆ ರಾಜಗುರುವಿನ ಆದೇಶದಂತೆ

ಕಾಶೀಶ್ವರಶಿವ ಎಂಬವನು ವೃತ್ತಿ ನೀಡಿದುದನ್ನು SIIX. 396 ದಾಖಲಿಸುತ್ತದೆ. SIIX. 454 of 1258 A.D.ಯ ಶಾಸನದಲ್ಲಿ ಈ ರಾಚಗುರುವು ಕಾಶೇಶ್ವರಶಿವನ ತಂದೆಯಾದ ವಿದ್ಯಾಶಿವನೆಂದು ಹೇಳಲಾಗಿದೆ. ಗೋಳಕಿಮಠದ ಕೇಂದ್ರವಾಗಿದ್ದ ಮಲ್ಕಾಪುರಮ್‌ದಲ್ಲಿ ಕಾಶೇಶ್ವರಶಿವನು ಪ್ರಮುಖವ್ಯಕ್ತಿಯಾಗಿದ್ದುದರಿಂದ,[೫೬] ವಿದ್ಯಾಶಿವನು ತನ್ನ ಮಗ ಕಾಶೇಶ್ವರಶಿವನ ಜೊತೆಗೆ ಆ ಪರಂಪರೆಯ ಸದಸ್ಯನಾಗಿದ್ದನೆಂದು ಪರಿಗಣಿಸಬಹುದು. 'ರಾಚಗುರು' ಎಂಬುದು ಬಿರುದಾಗಿದ್ದು, ಈ ವಿದ್ಯಾಶಿವನು ಸಂಗಮೇಶ್ವರದ ಸ್ಥಾನಪತಿಯ ಲಘು ಹುದ್ದೆಯಿಂದ ಕ್ರಿ.ಶ. ೧೨೮೨ರಷ್ಟೊತ್ತಿಗೆ ಕಾಕತಿಗಣಪತಿಯ ರಾಜಗುರುವಿನ ಅತ್ಯುನ್ನತ ಸ್ಥಾನಮಾನಕ್ಕೆ ಏರಿರಬಹುದು.

ಕಾಶೇಶ್ವರಶಿವನು ಮಲ್ಕಾಪುರಮ್ ಕೇಂದ್ರದ ಅಧಿಪತಿಯಾಗಿದ್ದ ಸರಿಸುಮಾರು ಕಾಲದಲ್ಲಿಯೇ ಉತ್ತಮಶಿವನು ಭಟ್ಟಿಪ್ರೋಲು ಊರಿನಲ್ಲಿ ಒಂದು ಶಾಸನವನ್ನು ಕೆತ್ತಿಸಿದ್ದು (ARIE 307 of 1936-37), ಅದು ಅವನನ್ನು ರಾಚಗುರುವಿನ (ಬಹುಶಃ ವಿಶ್ವೇಶ್ವರಶಿವನ) ಮಗನೆಂದು ಸೂಚಿಸುತ್ತದೆ. ಪಶ್ಚಿಮ ಗೋದಾವರಿ ಜಿಲ್ಲೆಯ ತಾಡಿಕಲ್ಪೂಂಡಿಯಲ್ಲಿರುವ ಉತ್ತಮಶಿವನ ಸು. ಕ್ರಿ.ಶ. ೧೨೭೫ ಇನ್ನೊಂದು ಶಾಸನ (SII V. 199) ಅವನು ಗೋಳಕಿ ಸ್ಥಾನಪತಿಯಾಗಿದ್ದನೆಂದು ನಿಸ್ಸಂದಿಗ್ಧವಾಗಿ ಹೇಳುತ್ತದೆ. ಬಹುಶಃ ಅವನು ತಾಡಿಕಲ್ಪೂಂಡಿಗಿಂತ ಹೆಚ್ಚಾಗಿ ಭಟ್ಟಿಪ್ರೋಲುವಿನಲ್ಲಿ ಸ್ಥಾನಪತಿಯಾಗಿದ್ದಿರಬಹುದು. ಭಟ್ಟಿಪ್ರೋಲುವಿನಲ್ಲಿ ಗೋಳಕಿಮಠ ಸದಸ್ಯನಾದ ಪರಿಪೂರ್ಣಶಿವನು ಎರಡು ದಶಕಗಳ ಹಿಂದೆ ಶಾಸನಗಳನ್ನು ಹೊರಡಿಸಿದ್ದ. ಕಡಪಾ ಜಿಲ್ಲೆಯ ರಾಜಂಪೇಟದ ಶಾಸನವೊಂದು ಉತ್ತಮಶಿವನ ಮಗ ಸಿದ್ಧಶಿವನಿಗೆ ಕಾಯಸ್ಥ ಅಂಬದೇವನು ಗ್ರಾಮಗಳನ್ನು ದತ್ತಿನೀಡಿದುದು ದಾಖಲಿಸಿದೆ.

ಇದೀಗ ಉಲ್ಲೇಖಿಸಿದ ವ್ಯಕ್ತಿಗಳಿಗೆ ಗೋಳಕಿಮಠದ ಸದಸ್ಯತ್ವ ಆರೋಪಿಸಲು ಆಧಾರಗಳು ಬಲವಾಗಿದ್ದು, ಉಳಿದಿಬ್ಬರ ವಿಷಯದಲ್ಲಿ ಹಾಗೆ ಹೇಳಲುಬಾರದು. ಸರ್ವೇಶ್ವರಯ್ಯ ಎಂಬವನ ಐದು ಶಾಸನಗಳು ಕರ್ನೂಲ ಜಿಲ್ಲೆಯ ನಂದಿಕೊಟ್ಕೂರ ತಾಲೂಕಿನಲ್ಲಿ ದೊರೆತಿವೆ (ARIE 320-323 of 1937-38 and 22 of 1942-43). ಅವುಗಳ ಕಾಲ ಶಕ ೧೨೦೮(ಸು ಕ್ರಿ.ಶ. ೧೨೮೬) ಮತ್ತು ಕ್ರಿ.ಶ. ೧೩೯೧ರ ಮಧ್ಯೆ ನಿಗದಿತಗೊಂಡಿದೆ. ಅವನು ಸ್ಪಷ್ಟವಾಗಿಯೆ ಆ ಪ್ರದೇಶದ ಚರಕುರಾಜರಿಗೆ ಗುರುವಾಗಿದ್ದ ಮತ್ತು ಅವರ ರಾಜಾಶ್ರಯದಿಂದ ಕರ್ನೂಲ ಜಿಲ್ಲೆಯ ಮಲಯಾಲದಲ್ಲಿ ಒಂದು ಮಠ, ಎರಡು ದೇವಾಲಯಗಳನ್ನು ಹಾಗೂ ಮಹಬೂಬನಗರ ಜಿಲ್ಲೆಯ ಅಲಂಪುರದಲ್ಲಿ ಒಂದು ಸತ್ರವನ್ನು ಸ್ಥಾಪಿಸಿದ ಮತ್ತು ತನ್ನ ಅಣ್ಣ ಸದಾಶಿವನ ಮಗ ಮಹಾದೇವನಿಗೆ ಈ ಸಂಸ್ಥೆಗಳನ್ನು ಒಪ್ಪಿಸಿದ. 1930-31ರ ARIE 301ರಲ್ಲಿ ಉಲ್ಲಿಖಿತವಾಗಿರುವಂತೆ, ಇವನು ಶಾಂತಶಿವನ ಮಗನಾದ ಸದಾಶಿವನೇ ಆಗಿರಬಹುದು. ಆದರೆ ಇವನ ಹೆಸರಾಗಲಿ ಇವನ ಸೋದರನ ಮಗನ ಹೆಸರಾಗಲಿ ಗೋಳಕಿಮಠದ ಲಾಕ್ಷಣಿಕ ಪ್ರತ್ಯಯವಾದ 'ಶಿವ'ದೊಂದಿಗೆ ಅಂತ್ಯವಾಗುತ್ತಿಲ್ಲವಾದ್ದರಿಂದ ಈ ಸರ್ವೇಶ್ವರಯ್ಯನು ಗೋಳಕಿಮಠ ಪರಂಪರೆಗೆ

ಸೇರಿದವನೆಂಬುದು ಹೆಚ್ಚಿನ ಆಧಾರ ಬಯಸುತ್ತದೆ.

ತರುವಾಯದ ಗೋಳಕಿಮಠದ ಹಲವಾರು ಸದಸ್ಯರಲ್ಲಿದ್ದ ಗಮನಾರ್ಹ ಲಕ್ಷಣವೆಂದರೆ ಅವರು ಪ್ರತ್ಯೇಕ ದೇವಾಲಯಗಳಲ್ಲಿ ಸ್ಥಾನಪತಿ ಹುದ್ದೆಯಲ್ಲಿದ್ದುದು. ಬಂಬಪಾಡುವಿನಲ್ಲಿ ಸದಾಶಿವ, ಸಂಗಮೇಶ್ವರದಲ್ಲಿ ವಿದ್ಯಾಶಿವ ಮತ್ತು (ಬಹುಶಃ ಭಟ್ಟಿಪ್ರೋಲುವಿನಲ್ಲಿ) ಉತ್ತಮಶಿವ ಸ್ಥಾನಪತಿಗಳಾಗಿದ್ದರೆಂದು ಸ್ಪಷ್ಟವಾಗಿ ಹೇಳಲಾಗಿದೆ. ಮೇಲೆ ಹೇಳಿದ ಮಹಾದೇವನನ್ನು ಸೇರಿಸುವುದಾದರೆ, ಅವನು ಮಲಯಾಲದಲ್ಲಿ ಸ್ಥಾನಪತಿಯಾಗಿದ್ದ. ದೇವಾಲಯದ ಸೇವಕರಿಗೆ ದೇವಾಲಯದ ಭೂಮಿಗಳನ್ನು ವೃತ್ತಿಗಳಾಗಿ ಹಂಚುವ ಕಾಶೇಶ್ವರನ ಅಧಿಕಾರವನ್ನು ಗಮನಿಸಿದರೆ, ಅವನು ಮಲ್ಕಾಪುರಮ್‌ದ ವಿಶ್ವನಾಥ ದೇವಾಲಯದ ಸ್ಥಾನಪತಿಯಾಗಿದ್ದನು. ಈ ವ್ಯಕ್ತಿಗಳಲ್ಲಿ ಮಹಾದೇವನೊಬ್ಬನೇ ಮಠವೊಂದರೊಂದಿಗೆ ಸಂಬಂಧ ಹೊಂದಿದವನು. ಈ ಪರಂಪರೆಯು ಕ್ರಮೇಣ ಒಳನಾಡಿನಲ್ಲಿ ಪಸರಿಸಿತೆಂಬ ಪರಿಸ್ಥಿತಿ ಇಲ್ಲಿ ಸೂಚಿತವಾಗಿದೆ. ಅದರ ಪ್ರಸರಣದ ಜೊತೆಗೇ ಗುರುವಿನ ಪಾತ್ರ ಕೂಡ ಆಡಳಿತಗಾರನ ಪಾತ್ರವಾಗಿ ಪಲ್ಲಟಗೊಂಡಿತು.

ಪ್ರಮುಖ ಮಠಾಧೀಶನು ಆ ಮಠ ಇದ್ದ ಊರಿನ ದೇವಾಲಯ ಸಂಕೀರ್ಣದ ಆಡಳಿತವನ್ನು ತನ್ನ ಕೈಗೆ ತೆಗೆದುಕೊಳ್ಳುವುದು ವಿರಳವೇನೂ ಆಗಿರಲಿಲ್ಲ. ದೇವಾಲಯದ ಆಸ್ತಿಗಳ ಮೇಲೂ ನಿಯಂತ್ರಣ ಎಂದು ಇದರರ್ಥ.[೨೪] ಆಂಧ್ರ ಗೋಳಕಿಮಠದ ಸ್ಥಾನಪತಿ ಹುದ್ದೆಗಳ ಪ್ರತಿಷ್ಠೆ ವರ್ಧಿಸುತ್ತ ಹೋದಂತೆ ಅಧೀನ ಮಠಗಳ ಮಹತ್ವ ಬಹಳಷ್ಟು ಮಂಕಾಗುತ್ತ ನಡೆಯಿತು. ತತ್ಪರಿಣಾಮವಾಗಿ, ಮೇಲೆ ಚರ್ಚಿಸಲಾದ ವ್ಯಕ್ತಿಗಳ ಶಾಸನಗಳಲ್ಲಿ ಮಠಗಳು ಸಂಸ್ಥೆಗಳಾಗಿ ಕಾಣಿಸಿಕೊಳ್ಳಲಿಲ್ಲ (ಮಹಾದೇವನನ್ನೊಬ್ಬನನ್ನು ಹೊರತುಪಡಿಸಿ). ಇಷ್ಟೇ ಏಕೆ ಗೋಳಕಿಮಠ ಕೂಡ ಒಂದೇ ಒಂದು ಶಾಸನದಲ್ಲಿ ಉಲ್ಲೇಖಗೊಂಡಿತು. ಶಾಂತಶಿವನ ಕಾಲಾನಂತರ 'ಗೋಳಕಿ' ಪದ ಒಮ್ಮೆ ಮಾತ್ರ—ಉತ್ತಮಶಿವನ ಕ್ರಿ.ಶ. ೧೨೭೫ರ ಶಾಸನದಲ್ಲಿ—ಕಂಡುಬರುತ್ತದೆ. 'ಗೋಳಕಿ' ಪದ ವಿವರಣಾತ್ಮಕ ಹುದ್ದೆಯಾಗಿ ಕಂಡುಬಂದಿರುವುದು, ಸಂಸ್ಥೆಯಾಗಿ ಗೋಳಕಿಮಠದ ಮಹತ್ವ ಕ್ಷೀಣಿಸಿದುದರ ಮತ್ತು ಅದರ ಗುರು-ಶಿಷ್ಯ ಸಂಬಂಧ ಬಲಗುಂದಿದ ಸೂಚಕವಾಗಿದೆ.

ಆಂಧ್ರದಲ್ಲಿ ಈ ಗೋಳಕಿಮಠದ ಪ್ರತಿಷ್ಠೆ ಇಳಿಮುಖವಾಗಲು ಅದರ ಅಧೀನ ಮಠಗಳ ಸಂಬಂಧ ಕಳೆದುಹೋದುದು ಕಾರಣವಾಗಿರಬಹುದು. ಎರಡನೆಯದಾಗಿ ವಿಶ್ವೇಶ್ವರಶಿವನ ಕಾಲದಿಂದ ಮುಂದಕ್ಕೆ ಆಂಧ್ರ ಗೋಳಕಿಮಠ ಪರಂಪರೆಯ ಕೆಲವು ಸದಸ್ಯರು ಸನ್ಯಾಸವ್ರತವನ್ನು ತೊರೆದು ಗೃಹಸ್ಥರಾದರೆಂದು ನನ್ನ ನಂಬಿಕೆ. ವಿವಾಹಿತ ಗುರುಗಳ ಆಗಮನದಿಂದಾಗಿ ಉತ್ತರಾಧಿಕಾರವು ಆಧ್ಯಾತ್ಮಿಕ ಅರ್ಹತೆ ಅಥವಾ ವಿದ್ವತ್ತಿನ ಆಧಾರದ ಮೇಲೆ ಆಗುವ ಬದಲು, ಬಹುಶಃ ಆನುವಂಶೀಯವಾಗಿ ಮುಂದುವರಿಯಿತು. ಅಂದರೆ ಗೋಳಕಿಮಠದ ಮಠೀಯ ಪರಂಪರೆಯಲ್ಲಿ ಅವರು ಹೊಂದಿದ ಆಧ್ಯಾತ್ಮಿಕ ಸಂಬಂಧಕ್ಕಿಂತ ಹೆಚ್ಚಾಗಿ ಪೂರ್ವಿಕನೊಬ್ಬನೊಂದಿಗೆ ಹೊಂದಿದ್ದ ರಕ್ತಸಂಬಂಧವೇ ಈ ಗುರುಗಳ ನಿರ್ಣಾಯಕ

ಅರ್ಹತೆಯಾಯಿತು.

ಇಂಥ ಪ್ರಮೇಯಕ್ಕೆ ಪ್ರಮಾಣ ಒದಗಿಸುವ ಮೊದಲು ಬೇರೆ ಊರುಗಳಲ್ಲಿ ಜರುಗಿದ ಗೃಹಸ್ಥಾಶ್ರಮ ಪಲ್ಲಟದ ಕೆಲವು ನಿದರ್ಶನಗಳನ್ನು ಕೊಡುತ್ತೇನೆ. ಕ್ರಿ.ಶ. ೧೧೭೧ರ ಬಳ್ಳಿಗಾವೆ ಶಾಸನವು ಪ್ರಖ್ಯಾತ ಕಾಳಾಮುಖ ಗುರು ವಾಮಶಕ್ತಿದೇವನ ಮೊಮ್ಮಗನನ್ನು ಉಲ್ಲೇಖಿಸುತ್ತದೆ. ಹೆಚ್ಚಿನದಾಗಿ "ಮಠದ ಸನ್ಯಾಸಿಗಳೆಲ್ಲರೂ ಬ್ರಹ್ಮಚಾರಿಗಳಾಗಿರಲಿಲ್ಲವೆಂದು ತೋರಿಸುತ್ತದೆ"[೫೫] ಎಂಬುದರತ್ತ ಡೇವಿಡ್ ಲೊರೆಂಝೆನ್ ಗಮನ ಸೆಳೆದಿದ್ದಾರೆ. "ಬೇಲೂರಿನ ಕಾಳಾಮುಖ ಸನ್ಯಾಸಿಗಳಿಗೆ ಮಾರ್ಗದರ್ಶಕರಾಗಿದ್ದ ಗುರುಗಳೆಲ್ಲ ವಿವಾಹಿತರಾಗಿದ್ದರು. ಹಾಗಾಗಿ, ಬೇಲೂರ ಆಚಾರ್ಯಾಧಿಕಾರ ಆನುವಂಶೀಯವಾಯಿತು"[೫೬] ಎಂದು ಆರ್.ಎನ್. ನಂದಿ ಹೇಳುವರು. ಅವರು ತಮ್ಮ ಹೇಳಿಕೆಗೆ ಹಳೇಬೀಡಿನ ಕ್ರಿ.ಶ. ೧೧೩೬ರ ಶಾಸನವನ್ನು ಆಧಾರವಾಗಿಟ್ಟುಕೊಂಡಿರುವರು. ಅಲ್ಲಿಯ ಮಠಾಧೀಶನಾಗಿದ್ದ ಈಶಾನಶಕ್ತಿಪಂಡಿತನ ವಂಶಾವಳಿಯ ಈಶಾನಶಕ್ತಿಬ್ರತೀಂದ್ರಂ ಎಂಬವನು ವಾಣಿ ಎಂಬ ಸ್ತ್ರೀಯನ್ನು ಮದುವೆಯಾದನೆಂದು ತಿಳಿಸುತ್ತದೆ. ಅವರ ಮಗಳ ಮಗನಾಗಿದ್ದವನು ದೇವೇಂದ್ರಪಂಡಿತ. ಅವನು ಮತ್ತು ಅವನ ಹೆಂಡತಿ (ಇವಳ ಹೆಸರೂ) ವಾಣಿ ಕಲ್ಯಾಣಶಕ್ತಿಪಂಡಿತನೆಂಬ ಮಗನನ್ನು ಹೆತ್ತರು.[೫೭] ಕಾಕತೀಯ ಕಾಲಘಟ್ಟದ ಕೆಲವು ಶತಮಾನಗಳ ತರುವಾಯ, ಪ್ರಸಿದ್ಧ ಪ್ರಕರಣವೊಂದು ಜರುಗಿತು. ತಿರುವಾನ್ಯೆಕ್ಕಾದಲ್ಲಿ ದೇವಾಲಯದ ಜೊತೆಗೆ ಮಠದ ಆಚಾರ್ಯನೂ ಆಗಿದ್ದ ಸನ್ಯಾಸಿಯನ್ನು ಬದಿಗೊತ್ತಿ ಪಾಶುಪತ ಗೃಹಸ್ಥನೊಬ್ಬನನ್ನು ದೇವಾಲಯದ ಅಧಿಪತಿಯನ್ನಾಗಿ ನೇಮಿಸಲಾಯಿತು.[೫೮] ಈ ಬದಲಾವಣೆಯನ್ನು ದಾಖಲಿಸುವ ಕ್ರಿ.ಶ. ೧೫೮೪ರ ಶಾಸನ, ಆ ಹುದ್ದೆಗಾಗಿ ವಿವಾಹಿತನಿಗೇ ಅಧಿಕ ಪ್ರಾಶಸ್ತ್ಯ ಏಕೆ ನೀಡಲಾಯಿತೆಂಬುದಕ್ಕೆ ಕಾರಣಗಳ ದೀರ್ಘ ಪಟ್ಟಿಯನ್ನು ನೀಡುತ್ತದೆ. ಹೀಗಿದ್ದೂ, ಈ ಮಠದ ವಿಷಯದಲ್ಲಿ ಸನ್ಯಾಸಿಯೇ ಮಠದ ನಿಯಂತ್ರಣವನ್ನು ತನ್ನ ಕೈಯಲ್ಲಿ ಇಟ್ಟುಕೊಂಡಿದ್ದನು.

ಗೋಳಕಿಮಠ ಪರಂಪರೆಯ ಕೆಲವು ಸದಸ್ಯರೂ ಬ್ರಹ್ಮಚರ್ಯವನ್ನು ತೊರೆದರೆಂಬ ಪ್ರಮೇಯವನ್ನು ಎತ್ತಿಹಿಡಿಯುವ ಗಟ್ಟಿ ಪ್ರಮಾಣವೊಂದಿದೆ. ಕ್ರಿ.ಶ. ೧೨೮೨ರ ಮಲ್ಕಾಪುರಮ್‌ನ SII X. 454ರಲ್ಲಿ ಕಾಶೇಶ್ವರಶಿವನು ತನ್ನ ತಾಯಿಯ ಹೆಸರನ್ನೂ ಹೇಳುವ ಮೂಲಕ ವಿದ್ಯಾಶಿವನೊಂದಿಗೆ ತನ್ನ ಸಂಬಂಧ ಕೇವಲ ಆಧ್ಯಾತ್ಮಿಕವಾಗಿರದೆ ನಿಜವಾದ ರಕ್ತಸಂಬಂಧವಾಗಿದಿತೆಂದು ತೋರ್ಪಡಿಸುವನು. ಹೀಗೆ, ಕಾಶೇಶ್ವರಶಿವನು ವಿದ್ಯಾಶಿವನ ನಿಜವಾದ ಪುತ್ರನಾಗಿದ್ದನು. ಸ್ವತಃ ವಿದ್ಯಾಶಿವನೂ ವಿಶ್ವೇಶ್ವರಶಿವನ ಮಗ ಅಥವಾ ಸಂಬಂಧಿಯಾಗಿರಬಹುದು. ಮೇಲೆ ಹೇಳಿದ ಶಾಸನದಲ್ಲಿ ಕಾಶೇಶ್ವರಶಿವನದು ಶ್ರೀವತ್ಸಗೋತ್ರವೆಂದು ನಿರ್ದಿಷ್ಟಪಡಿಸಲಾಗಿದೆ. ಅದೇ ಗೋತ್ರ ವಿಶ್ವೇಶ್ವರಶಿವನ ಮಲ್ಕಾಪುರಮ್ ಶಾಸನದಲ್ಲೂ ಕಾಣಿಸಿಕೊಳ್ಳುವುದು. ಅದರಲ್ಲಿ ಹೇಳಿರುವಂತೆ, ವಿಶ್ವೇಶ್ವರ ಶಿವನು ಗೌಡಪ್ರದೇಶದಲ್ಲಿರುವ ತನ್ನ ಹುಟ್ಟೂರಾದ ಪೂರ್ವಗ್ರಾಮಕ್ಕೆ ಸಂಬಂಧಿಸಿದ

ಶ್ರೀವತ್ಸಗೋತ್ರದ ಬ್ರಾಹ್ಮಣರನ್ನು ಮಲ್ಕಾಪುರಮ್‌ದಲ್ಲಿ ಹೊಸದಾಗಿ ನಿರ್ಮಿತವಾದ ವಿಶ್ವೇಶ್ವರಗೋಳಕಿ ಎಂಬ ಗ್ರಾಮದಲ್ಲಿ ನೆಲೆಗೊಳಿಸಿದನು. ಅವರು ತನ್ನ ಪರಿವಾರದ ಸದಸ್ಯರಾಗಿರದಿದ್ದ ಪಕ್ಷದಲ್ಲಿ ಅವರನ್ನು ಅವನು ಅಷ್ಟು ದೂರದಿಂದ ಕರೆಸುತ್ತಿದ್ದನೆ? ವಿಶ್ವೇಶ್ವರಶಿವನ ಗೋತ್ರ ಶ್ರೀವತ್ಸ ಆಗಿತ್ತೆಂಬ ಪ್ರಮೇಯವನ್ನು ಒಪ್ಪುವುದಾದರೆ, ವಿದ್ಯಾಶಿವನು ಖಂಡಿತವಾಗಿಯೂ ಅವನ ಮಗನಾಗಿರಲು ಸಾಕು. ಇದರಿಂದ ಕಾಶೇಶ್ವರಶಿವನು ಅವನ ಮೊಮ್ಮಗನಾಗುವನು ಎಂಬ ಬಗೆಗೆ ಮತ್ತು ಕಾಶೇಶ್ವರಶಿವನು ಮಲ್ಕಾಪುರಮ್‌ನ ಪ್ರತಿಷ್ಠಿತ ಗೋಳಕಿಮಠದಲ್ಲಿ ತನ್ನ ಹುದ್ದೆಯನ್ನು ಗಳಿಸಿಕೊಳ್ಳಲು ಹೇಗೆ ಶಕ್ತನಾದನು ಎಂಬ ಬಗೆಗೆ ಸಮರ್ಥನೆ ದೊರೆಯುತ್ತದೆ. ಕ್ರಿ.ಶ. ೧೨೮೨ರಲ್ಲಿ ವಿದ್ಯಾಶಿವನು ರಾಜಗುರುವಿನ ಸ್ಥಾನಕ್ಕೆ ಏರಿದುದನ್ನೂ ಅದು ವಿವರಿಸುತ್ತದೆ.

ವಿಶ್ವೇಶ್ವರಶಿವನೊಂದಿಗೆ ವಿದ್ಯಾಶಿವನ ರಕ್ತಸಂಬಂಧವು ಊಹೆ ಮಾತ್ರವಾಗಿದೆ. ಆದರೆ, ಕೆಳಗಿನ ಇನ್ನಿಬ್ಬರ ಹೇಳಿಕೆಗಳಿಗೆ ಹೆಚ್ಚು ಮಹತ್ವಕೊಡಬೇಕು. ಪರಿಪೂರ್ಣಶಿವನ ಶಾಸನವೊಂದರಲ್ಲಿ (ARIE 293 of 1936-37) ತಾನು ಧರ್ಮಶಿವನ ಶಿಷ್ಯನಾದ ವಿಶ್ವೇಶ್ವರಶಿವನ ಮಗನೆಂದು ವಿದ್ಯಾಶಿವನು ಹೇಳಿಕೊಂಡಿರುವನು. ಧರ್ಮಶಿವ ಮತ್ತು ವಿಶ್ವೇಶ್ವರಶಿವ ಇವರ ನಡುವಣ ಸಂಬಂಧವನ್ನು ಸೂಚಿಸುವ ಪದ 'ಶಿಷ್ಯ' ಎಂದಿದ್ದು ಅದು ರಕ್ತಸಂಬಂಧಸೂಚಕ ಪದವಾಗಿಲ್ಲವಾದರೂ ಪರಿಪೂರ್ಣಶಿವನು ವಿಶ್ವೇಶ್ವರಶಿವನೊಂದಿಗಿನ ತನ್ನ ಸಂಬಂಧದ ವಿಷಯದಲ್ಲಿ 'ಮಗ' (ಕೊಡುಕು) ಎಂಬ ಪದವನ್ನು ಬಳಸುವನು. ಮಠೀಯ ಪರಿಭಾಷೆಯಲ್ಲಿ 'ಮಗ' ಎಂಬ ಪದ ಆಲಂಕಾರಿಕವಾಗಿ ಶಿಷ್ಯನನ್ನು ಸೂಚಿಸುವುದೆ ಹೆಚ್ಚು. ಆದರೆ, ARIE 294 of 1936-37ರಲ್ಲಿ ಪರಿಪೂರ್ಣಶಿವನು ವಿಶ್ವೇಶ್ವರಶಿವನನ್ನು ತನ್ನ ತಂದೆ (ತಂಡ್ರಿ) ಎಂದೂ ಕರೆದಿರುವನು. ನನಗೆ ತಿಳಿದಮಟ್ಟಿಗೆ ಇದಕ್ಕೆ ಆಲಂಕಾರಿಕ ಅರ್ಥವಿಲ್ಲ. ಸದಾಶಿವನನ್ನು ಸೂಚಿಸುವ 'ಅಣ್ಣ' ಪದವನ್ನು ಅಕ್ಷರಶಃ ಅರ್ಥದಲ್ಲಿ ತೆಗೆದುಕೊಳ್ಳಬೇಕೆಂಬುದು ನನ್ನ ಅಭಿಪ್ರಾಯ.

ಪರಿಪೂರ್ಣಶಿವನಲ್ಲದೆ ಇನ್ನೊಬ್ಬನು ವಿಶ್ವೇಶ್ವರಶಿವನೊಂದಿಗೆ ತಾನು ರಕ್ತಸಂಬಂಧ ಹೊಂದಿದ್ದುದಾಗಿ ಒತ್ತಿ ಹೇಳುವನು. ಇವನು ನರಸಿಂಹಋಷಿ, ಶೈವ ಸನ್ಯಾಸಿಯಲ್ಲ. ಆದರೆ ಆಸ್ಥಾನ ಸಂಸ್ಕೃತಕವಿ. ಇವನ ಎರಡು ಕೃತಿಗಳನ್ನು ಪ್ರತಾಪರುದ್ರನ ಆಳ್ವಿಕೆಯಲ್ಲಿ ಕಾಕತೀಯ ರಾಜಧಾನಿಯಾದ ವಾರಂಗಲ್ಲ ಬಳಿಯ ಬಂಡೆಗಳ ಮೇಲೆ ಕೆತ್ತಲಾಯಿತು.[೫೯] ಒಂದು ಕೃತಿಯಲ್ಲಿ ತಾನು ರಾಜಗುರು ವಿಶ್ವೇಶ್ವರಪಂಡಿತನ ಮಗನೆಂದು ಹೇಳಿಕೊಂಡಿದ್ದ ಇನ್ನೊಂದರಲ್ಲಿ ಕೇವಲ ವಿಶ್ವೇಶ್ವರಶಿವನ ಮಗನೆಂದು ಹೇಳಿಕೊಂಡಿದ್ದರೂ, ಖಂಡಿತವಾಗಿಯೂ ಗೋಳಕಿಮಠದ ವಿಶ್ವೇಶ್ವರಶಿವನ ಮಗನೇ ಆಗಿದ್ದಾನೆ.[೬೦]

ಮೇಲೆ ಹೇಳಿದ ವಿವಿಧ ಆಧಾರಾಂಶಗಳನ್ನು ಒಟ್ಟಿಗಿಟ್ಟು ನೋಡಿದರೆ, ವಿಶ್ವೇಶ್ವರಶಿವನಿಂದ ಆರಂಭವಾದ ಗೋಳಕಿಮಠದ ಕೆಲವು ಆಚಾರ್ಯರು ಬ್ರಹ್ಮಚಾರಿ ಜೀವನಶೈಲಿ ತೊರೆದು ಗೃಹಸ್ಥರಾದರೆಂಬ ಬಗೆಗೆ ಸಾಕಷ್ಟು ಮನವರಿಕೆಯಾಗುತ್ತದೆ.[೬೦] ಇದಕ್ಕೆ

ಸಮಾನವಾದ ಬೆಳವಣಿಗೆಯೆಂದರೆ ಈ ಮಠೀಯ ಪರಂಪರೆಯ ಸದಸ್ಯರು ಹಲವು ದೇವಾಲಯಗಳಲ್ಲಿ ಸ್ಥಾನಪತಿಗಳ ಹುದ್ದೆ ಪಡೆದುದು. ಅಲ್ಲಲ್ಲಿ ಅವರು ಬಹುಶಃ ಆನುವಂಶೀಯವಾಗಿ ಭದ್ರವಾಗಿ ಬೇರೂರಿದ್ದರು. ಆದರೆ, ಈ ಬೆಳವಣಿಗೆಗಳು ಈ ಪರಂಪರೆಯ ಎಲ್ಲ ಸದಸ್ಯರಿಗೂ ಅನ್ವಯಿಸುವವೆಂದು ನಂಬುವುದು ಕಷ್ಟ. ಆದ್ದರಿಂದ, ಶಾಂತಶಿವನ ತರುವಾಯದ ಹಲವಾರು ದಶಕಗಳ ವರೆಗೆ ಗೋಳಕಿಮಠವು ಶ್ರೀಶೈಲಮ್ ಮತ್ತು ತ್ರಿಪುರಾಂತಕಮ್‌ಗಳಂಥ ಪ್ರಮುಖ ದೇವಾಲಯಸ್ಥಳಗಳಲ್ಲಿ ತನ್ನ ಸಾಂಸ್ಥಿಕ ನೆಲೆಯನ್ನು ಕಾಯ್ದುಕೊಂಡಿತೆಂದು ಗ್ರಹಿಸಬಹುದು. ಆದರೆ, ಇದಕ್ಕೆ ಸ್ಪಷ್ಟ ಆಧಾರ ದೊರೆಯುತ್ತಿಲ್ಲ.

ಶಿವನ ಹನ್ನೆರಡು ಜ್ಯೋತಿರ್ಲಿಂಗಗಳಲ್ಲೊಂದಾದ ಶ್ರೀಶೈಲಮ್ ೧೩ನೆಯ ಶತಮಾನದಲ್ಲಿ ಗೋಳಕಿಮಠದ ಭದ್ರ ನೆಲೆಯಾಗಿದ್ದುದಲ್ಲದೆ ಕಾಪಾಲಿಕರು, ಸಿದ್ಧರು ಮತ್ತು ಕಾಳಾಮುಖರಂಥ ಅನೇಕ ಶೈವಪಂಥಗಳ ಚಟುವಟಿಕೆಗಳ ಕೇಂದ್ರಬಿಂದುವಾಗಿತ್ತು.[೬೧] ೧೪ನೆಯ ಶತಮಾನದ ಆರಂಭದಲ್ಲಿ ಶ್ರೀಶೈಲದ ಈ ದೇವಾಲಯ ಸಂಕೀರ್ಣದ ಮೇಲೆ ಮತ್ತು ಅದರ ಹೆಬ್ಬಾಗಿಲುಗಳಂತಿದ್ದ ಉತ್ತರ ದಿಕ್ಕಿನ ಉಮಾಮಹೇಶ್ವರಮ್ ಗ್ರಾಮದ ಮತ್ತು ಪೂರ್ವದಿಕ್ಕಿನ ತ್ರಿಪುರಾಂತಕಮ್ ಗ್ರಾಮದ ದೇವಾಲಯಗಳ ಮೇಲೆ ಮತ್ತೊಂದು ಶೈವ ಬಣವು ನಿಯಂತ್ರಣ ಪಡೆದುಕೊಂಡಿತು.[೬೨] ಈ ಮೂರು ಊರುಗಳ ಕ್ರಿ.ಶ. ೧೩೧೨ ಮತ್ತು ೧೩೨೦ರ ಮಧ್ಯದ ನಾಲ್ಕು ಶಾಸನಗಳು 'ಅಸಂಖ್ಯಾತ ಮಾಹೇಶ್ವರರು' ಎಂಬ ಸಮುದಾಯದ ಪ್ರಾಬಲ್ಯವನ್ನು ತೋರ್ಪಡಿಸುತ್ತವೆ. ಈ ಸಮುದಾಯದ ನಿರ್ದೇಶನದಲ್ಲಿ ಅನೇಕ ನೂತನ ಪೂಜಾವ್ಯವಸ್ಥೆಗಳನ್ನು ಮಾಡಲಾಯಿತು. ಇವುಗಳಲ್ಲಿ ಅತ್ಯಂತ ಗಮನಾರ್ಹವಾದ SII X, 504ರ ಶ್ರೀಶೈಲಮ್ ಶಾಸನವು ಅಲ್ಲಿ ವಾಸವಾಗಿದ್ದ 'ಅಸಂಖ್ಯಾತ ಮಾಹೇಶ್ವರ'ರು ತಮ್ಮ ಆದೇಶದಂತೆಯೇ ದೇವತೆಯ ಪೂಜೆ ನಡೆಯಬೇಕೆಂದು ಅರಸುಮಠದ ಈಶ್ವರಶಿವ ಮತ್ತು ಆರಾಧ್ಯಪ್ರೆಗಡರಿಂದ ವಚನ ತೆಗೆದುಕೊಂಡರೆಂದು ತಿಳಿಸುತ್ತದೆ. ಹಿಂದಿನ ಕಾಲದಲ್ಲಿ ದತ್ತಿಯಾಗಿ ಬಂದಿದ್ದ , ಸ್ಪಷ್ಟವಾಗಿಯೇ ಅರಸುಮಠ ನಿಯಂತ್ರಣ ಹೊಂದಿದ್ದ ಸುಮಾರು ೭೦ ಗ್ರಾಮಗಳ ಪಟ್ಟಿಯನ್ನು ಈ ಶಾಸನದಲ್ಲಿ ದಾಖಲಿಸಲಾಗಿದೆ. ಅದರ ಇಂಗಿತವೆಂದರೆ, ಈ ದತ್ತಿಗಳ ಸಂಪನ್ಮೂಲಗಳನ್ನು ಇನ್ನು ಮುಂದೆ ಈ 'ಅಸಂಖ್ಯಾತ ಮಾಹೇಶ್ವರರು' ತಮಗೆ ಸರಿಕಂಡಂತೆ ಉಪಯೋಗಿಸುವುದು. ಈ ಹಿಂದೆ ಹೇಳಿರುವಂತೆ, ಶಾಸನಗಳಲ್ಲಿ ಶ್ರೀಶೈಲದ ಉಲ್ಲೇಖವು ಅಲ್ಲಿಯ ಕ್ರಿ.ಶ. ೧೩೧೨ ಶಾಸನದಿಂದ ಮುಂದೆ ಅಂದರೆ, ಮೇಲೆ ಹೇಳಿದ ಪೂಜಾ ಒಡಂಬಡಿಕೆಗಿಂತ ಒಂದು ವರ್ಷ ಮೊದಲು ಲಭ್ಯವಿದೆ. ಈ ದಿನಾಂಕಕ್ಕಿಂತ ಪೂರ್ವದ ಶಾಸನಗಳನ್ನು 'ಅಸಂಖ್ಯಾತರು',[೬೩] ಬಹುಶಃ ಪ್ರಾಚೀನ ದತ್ತಿಗಳ ದಾಖಲೀಕರಣವನ್ನು ಅಳಿಸಿಹಾಕಲೋಸುಗ, ಉದ್ದೇಶಪೂರ್ವಕವಾಗಿಯೇ ನಾಶಮಾಡಿದರೆಂಬುದು ಶ್ರೀ ಪರಬ್ರಹ್ಮಶಾಸ್ತ್ರಿ ಅವರು ಹೇಳುತ್ತಾರೆ.

ಯಾರೀ 'ಅಸಂಖ್ಯಾತ ಮಾಹೇಶ್ವರರು'? ಸಮಷ್ಟಿ ವ್ಯವಸ್ಥೆ ಎಂಬರ್ಥದಲ್ಲಿ 'ಮಾಹೇಶ್ವರ' ಪದವು ದೇವಾಲಯದ ಕಲಾಪಗಳ ಮೇಲ್ವಿಚಾರಣೆ ಮಾಡುತ್ತಿದ್ದ ಅರ್ಚಕವರ್ಗ

ರೂಪದಲ್ಲಿ ಚೋಳರ ಕಾಲದಿಂದ ತಮಿಳುಶಾಸನಗಳಲ್ಲಿ ಕಂಡುಬರುತ್ತದೆ. 'ಅಸಂಖ್ಯಾತ' ಪದದ ಜೋಡಣೆಯಿಂದಾಗಿ, ಆ ಸಮಸ್ತ ಪದವು ಒಟ್ಟಾರೆ ವೀರಶೈವ ಒಲವುಗಳನ್ನು[೧೬] ಸೂಚಿಸುತ್ತದೆ. ಹಾಗೆಂದು ವ್ಯಾಖ್ಯಾನಿಸಿದ ಪರಬ್ರಹ್ಮಶಾಸ್ತ್ರಿ ಅದನ್ನು "ವೀರಶೈವ ಸಮುದಾಯದ ಕಾರ್ಯಕಾರಿ ಸಮಿತಿ"[೧೭] ಎಂದು ಅನುವಾದಿಸಿರುವರು. ಮೇಲೆ ಚರ್ಚಿಸಿದ SII X 504ರ ಎರಡು ಅಂಶಗಳು ಈ ಗುರುತಿಸುವಿಕೆಯನ್ನು ಸಮರ್ಥಿಸುತ್ತವೆ. ಕಾಕತೀಯ ಕಾಲದ ಶಾಸನಗಳಲ್ಲಿ ಸಾಮಾನ್ಯವಾಗಿ ಕಂಡುಬರುವ "ಮಹಾದೇವರ" ಅಥವಾ "ದೇವರ" ಎಂಬ ಅಂಕಿತಕ್ಕಿಂತ ಹೆಚ್ಚಾಗಿ "ಮಹಾಲಿಂಗ ಚಕ್ರವರ್ತಿ" ಎಂಬ ಉಪಾಧಿಯು ಮಲ್ಲಿಕಾರ್ಜುನ ದೇವತೆಗಿರುವುದು ಅತಿ ಮುಖ್ಯ ಅಂಶ. ಎರಡನೆಯದಾಗಿ, 'ಆರಾಧ್ಯ' ಪದವನ್ನು ಒಬ್ಬ ಅಥವಾ ಹೆಚ್ಚು ಪ್ರೆಗಡರಿಗೆ ಬಳಸಲಾಗಿದೆ. 'ಪ್ರೆಗಡ' ಎಂದರೆ ರಾಜನ ಮಂತ್ರಿ, ವಿಶೇಷವಾಗಿ ದೇವಾಲಯದ ಅಧಿಕಾರಿ.[೧೮] ನಂತರದ ವೀರಶೈವ ಐತಿಹ್ಯದ ಪ್ರಕಾರ, ಐವರು ಆರಾಧ್ಯರು, (ರೇವಣಾರಾಧ್ಯ, ಏಕೋರಾಮಾಧ್ಯ ಇತ್ಯಾದಿ) ಮೂಲ ಧರ್ಮಪ್ರವರ್ತಕರೆನಿಸಿದ್ದಾರೆ. ಅವರಲ್ಲಿ ಪ್ರತಿಯೊಬ್ಬನೂ ಪವಿತ್ರ ತಾಣದಲ್ಲಿ ಮಠವನ್ನು ಸ್ಥಾಪಿಸಿದನು.[೧೯] ಅವರ ಪೈಕಿ ಶ್ರೀಶೈಲಮ್‌ದಲ್ಲಿ ನೆಲೆಸಿದ್ದ ಪಂಡಿತಾರಾಧ್ಯನು ೧೨ನೆಯ ಶತಮಾನದ ಮಲ್ಲಿಕಾರ್ಜುನ ಪಂಡಿತಾರಾಧ್ಯನೇ ಆಗಿರಬೇಕು. ಅವನು, ಒಂದು ವಿಶಿಷ್ಟ ತೆಲುಗು ಸಮುದಾಯವಾಗಿರುವ ಆರಾಧ್ಯರು ಇವತ್ತಿಗೂ ಗೌರವಿಸುತ್ತಿರುವ ವಿಖ್ಯಾತ ಪಂಡಿತತ್ರಯರಲ್ಲಿ ಒಬ್ಬನು.[೨೦]

ಇಂದು ವೀರಶೈವ ಲಿಂಗಾಯತರು ಮತ್ತು ತೆಲುಗು ಆರಾಧ್ಯರನ್ನು ಸ್ಪಷ್ಟವಾಗಿ ವಿಂಗಡಿಸಬಹುದಾಗಿದೆ. ಇವರಿಬ್ಬರ ಅತ್ಯಂತ ಮಹತ್ವದ ವ್ಯತ್ಯಾಸವೆಂದರೆ ಆರಾಧ್ಯರೆಲ್ಲ ಬ್ರಾಹ್ಮಣರಾಗಿದ್ದು ವೈದಿಕ ವ್ರತಾಚರಣೆಗೆ ಬದ್ಧರಾಗಿರುವರು.[೨೧] ಆದರೆ ಇಬ್ಬರೂ ಅನುಸರಿಸುವ ಅಂಗದ ಮೇಲೆ ಲಿಂಗ ಧರಿಸುವ[೨೨] ಸಂಪ್ರದಾಯ ಮತ್ತು ಕೆಲವು ಸಂತರನ್ನು ಇಬ್ಬರೂ ಗೌರವಿಸುವ ಸಂಗತಿ, ಪೂರ್ವಕಾಲದಲ್ಲಿ ಇವರು ಒಂದೇ ಮೂಲದವರಾಗಿದ್ದರೆಂಬುದನ್ನು ಸೂಚಿಸುತ್ತವೆ. ಈ ಪಂಥಗಳು ೧೩ನೆಯ ಮತ್ತು ೧೪ನೆಯ ಶತಮಾನಗಳಲ್ಲಿ ಯಾವ ರೂಪ ತಳೆದವೆಂಬ ಪ್ರಶ್ನೆಗೆ ಈಗ ಉತ್ತರ ಸಾಧ್ಯವಿಲ್ಲ. ಆದರೆ, 'ಅಸಂಖ್ಯಾತ ಮಾಹೇಶ್ವರ' ಎಂಬವರು ಲಿಂಗಪೂಜೆಗೆ ಆದ್ಯತೆಯಿತ್ತ ಮತ್ತು ತೀವ್ರ ಭಕ್ತಿವಂತಿಕೆಯ ಲಕ್ಷಣ ಹೊಂದಿದ್ದ ವ್ಯಾಪಕ ಶೈವಚಳವಳಿಯ ಅಂಗವಾಗಿರಬೇಕು. ವೀರಶೈವರು ಮತ್ತು ಆರಾಧ್ಯರು ಇಬ್ಬರಿಗೂ ಶ್ರೀಶೈಲಮ್ ವಿಶೇಷತಃ ಪವಿತ್ರ ಸ್ಥಳವಾಗಿತ್ತು. ಅವರ ದೇವತೆ ಮಲ್ಲಿಕಾರ್ಜುನನನ್ನು ೧೨ನೆಯ ಶತಮಾನದ ಪ್ರಖ್ಯಾತ ವೀರಶೈವ ಶರಣೆಯಾದ ಅಕ್ಕಮಹಾದೇವಿ ತನ್ನ ವಚನಗಳಲ್ಲಿ ಸ್ತುತಿಸಿರುವಳು.[೨೩] ಶ್ರೀಶೈಲಮ್ ಪುಣ್ಯಕ್ಷೇತ್ರವನ್ನು ಮತ್ತು ಅಲ್ಲಿಗೆ ಮಲ್ಲಿಕಾರ್ಜುನಪಂಡಿತನು ಕೈಕೊಂಡ ಪಯಣವನ್ನು ವರ್ಣಿಸುವ ದೀರ್ಘ ಅಧ್ಯಾಯವೊಂದು ೧೩ನೆಯ ಶತಮಾನದ ಕೊನೆಗೆ ಪಾಲ್ಕುರಿಕೆ ಸೋಮನಾಥ ರಚಿಸಿದ ಆರಾಧ್ಯಚರಿತ್ರೆಯಲ್ಲಿ ಅಡಕಗೊಂಡಿದೆ.[೨೪]

ವೀರಶೈವ ಒಲವಿನ 'ಅಸಂಖ್ಯಾತ ಮಾಹೇಶ್ವರ'ರು ಮಠಗಳನ್ನು ಯಶಸ್ವಿಯಾಗಿ ಕೈವಶಪಡಿಸಿಕೊಂಡಿದ್ದರೆಂದು ತಿಳಿಯಬಹುದು. ಏಕೆಂದರೆ, ಕಲ್ಲು, ಅರಸು ಮತ್ತು ಗೋಳಕಿ

ಮಠಗಳು ಇಲ್ಲಿಂದ ಮುಂದೆ ಶಾಸನಗಳಿಂದ ಮರೆಯಾಗಿ ಇತರ ಮಠಗಳೊಂದಿಗೆ ಭಿಕ್ಷಾವೃತ್ತಿಮಠಗಳು ಅವುಗಳ ಸ್ಥಾನ ಆಕ್ರಮಿಸಿದವು. ರೆಡ್ಡಿ ಮತ್ತು ವಿಜಯನಗರ ಕಾಲಗಳಲ್ಲಿ ಈ (ಭಿಕ್ಷಾವೃತ್ತಿ) ವೀರಶೈವ ಅಧಿಕಾರವರ್ಗ ಶ್ರೀಶೈಲಮ್‌ದಲ್ಲಿ ಪ್ರಭಾವಶಾಲಿಯಾಗಿತ್ತು ಮತ್ತು ತ್ರಿಪುರಾಂತಕಮ್‌ದಲ್ಲೂ ಒಂದು ಶಾಖೆಯನ್ನು ಹೊಂದಿತ್ತು. ಈ ಮಠ ಮತ್ತು ಅದರ ಪ್ರಧಾನ ಗುರುಗಳ (ಅವರೆಲ್ಲರ ಹೆಸರಿನಲ್ಲೂ 'ಭಿಕ್ಷಾವೃತ್ತಿ' ಪದವಿದೆ) ಉಲ್ಲೇಖಗಳು ಕ್ರಿ.ಶ. ೧೩೮೫ರಲ್ಲಿ ತ್ರಿಪುರಾಂತಕಮ್‌ದಲ್ಲಿ ಆರಂಭಗೊಳ್ಳುತ್ತವೆ ಮತ್ತು ಭಿಕ್ಷಾವೃತ್ತಿ ಸಿದ್ಧಯದೇವಯ್ಯನನ್ನು ತ್ರಿಪುರಾಂತಕಮ್‌ದಲ್ಲಿರುವ ದೇವತೆಯ ಭಕ್ತನೆಂದೂ ಕೈಲಾಸದಲ್ಲಿರುವ ಅಂದರೆ ಶ್ರೀಶೈಲಮ್‌ದಲ್ಲಿರುವ ಮಹಾಮಹಾಂತರ ಅಧಿಪತಿಯೆಂದೂ ಉಲ್ಲೇಖಿಸುತ್ತವೆ.[೭೫] ಇದರರ್ಥವೆಂದರೆ, ಶ್ರೀಶೈಲಮ್‌ನಲ್ಲೂ ಆಗಲೇ (ಭಿಕ್ಷಾವೃತ್ತಿ) ಮಠವನ್ನು ಸ್ಥಾಪಿಸಲಾಗಿತ್ತು. ಆದಾಗ್ಯೂ ಶ್ರೀಶೈಲದಲ್ಲಿ ಲಭ್ಯವಿರುವ ಅದರ ಬಗೆಗಿನ ಅತಿ ಪ್ರಾಚೀನ ಉಲ್ಲೇಖವೆಂದರೆ ಕ್ರಿ.ಶ. ೧೪೪೬ರ ವಿರೂಪಾಕ್ಷನ ತಾಮ್ರಪಟ ದತ್ತಿಯಾಗಿದೆ.[೭೬]

ನಾನು ತೋರಿಸಿರುವಂತೆ, ೧೪ನೆಯ ಶತಮಾನದ ಆರಂಭಕಾಲಕ್ಕೆ ಗೋಳಕಿಮಠ ಪರಂಪರೆ ಆಂಧ್ರದಲ್ಲಿ ಮಹತ್ವದ ಶಕ್ತಿಯಾಗಿ ಉಳಿಯಲಿಲ್ಲ. ಆದರೂ ಕುತೂಹಲಕರವಾಗಿ, ಅದರ ಘನತೆ ಭಿಕ್ಷಾವೃತ್ತಿ ವೀರಶೈವ ಮಠವೆಂಬ ಹೆಸರಿನಲ್ಲಿ ಪ್ರತಿಧ್ವನಿಸುತ್ತ ಸಾಗಿತು. ಆಂಧ್ರದಲ್ಲಿ ಗೋಳಕಿಮಠ ಬೇರೆ ಯಾವ ಹೆಸರಿನಲ್ಲೂ ಪರಿಚಿತವಿರಲಿಲ್ಲ. ಆದರೆ ತಮಿಳುನಾಡಿನಲ್ಲಿ ಅದು ಭಿಕ್ಷಾಮಠ(ಸಂತಾನ) ಮತ್ತು ಲಕ್ಷಾಧ್ಯಾಯಿಸಂತಾನ ಎಂಬ ಹೆಸರಿನಿಂದಲೂ ಪ್ರಚಲಿತವಿತ್ತು.[೭೭] ಕೊನೆಯ ಇವೆರಡು ಹೆಸರುಗಳನ್ನು "ಭಿಕ್ಷಾವೃತ್ತಿಯಿಂದ ಅಥವಾ ಲಕ್ಷಕಾಣಿಕೆಯಿಂದ ಪೋಷಿತವಾದ ಮಠದ ಗುರುಗಳ ವಂಶಜರು" ಎಂದು ವೆಂಕಟರಮಣಯ್ಯ ಮತ್ತು ಸೋಮಶೇಖರ ಶರ್ಮಾ ಅನುವಾದಿಸಿರುವರು.[೭೮] ಇದು ಕಲಚೂರಿ ಅರಸನಾದ ಯುವರಾಜನ ಮೂಲದತ್ತಿಯನ್ನು ಸೂಚಿಸುತ್ತದೆ. ಮಲ್ಕಾಪುರಮ್ ಶಾಸನದ ಪ್ರಕಾರ, ಆ ದತ್ತಿಯಿಂದ (ಪ್ರಥಮ) ಗೋಳಕಿಮಠವನ್ನು ಸ್ಥಾಪಿಸಲು ಸದ್ಭಾವಶಂಭುವಿಗೆ ಸಾಧ್ಯವಾಯಿತು. ಮೂರು ಲಕ್ಷ ಗ್ರಾಮಗಳ ಈ ದತ್ತಿಯನ್ನು ಆ ಸಂಸ್ಕೃತ ಶಾಸನದ ೭೧ನೆಯ ಸಾಲಿನಲ್ಲಿ ವಸ್ತುತಃ "ಭಿಕ್ಷಾ" ಎಂಬ ಶಬ್ದದಿಂದ ಸೂಚಿಸಲಾಗಿದೆ ಮತ್ತು ತೆಲುಗು ಶಬ್ದ "ವ್ರಿತ್ತಿ"ಗೂ (ಸಂಸ್ಕೃತ "ವೃತ್ತಿ") ಇದೇ ಅರ್ಥವಿದೆ, ಅರ್ಥಾತ್ ಜೀವನಾಧಾರ ದತ್ತಿ.

ವೀರಶೈವ ಸ್ಥಿರವ್ಯವಸ್ಥೆಗೆ ಗೋಳಕಿಮಠವೆಂದು ಕರೆದಿರುವುದು ಕೇವಲ ಕಾಕತಾಳೀಯವೆ? ಇನ್ನೊಂದು ವಿಚಿತ್ರ ಸಂಗತಿ ಘಟಿಸಿರದಿದ್ದರೆ ಅದನ್ನು ಕಾಕತಾಳೀಯವೆಂದು ತಳ್ಳಿಹಾಕಿಬಿಡಬಹುದಿತ್ತು. ಅದು ಶಾಂತಲಿಂಗಯ್ಯ ಎಂಬ ಭಿಕ್ಷಾವೃತ್ತಿ ಸದಸ್ಯನಿಗೆ ಶ್ರೀಶೈಲಮ್ ಕೈಫಿಯತ್ತು ಬಿರುದಾವಳಿಯನ್ನು ಆರೋಪಿಸುತ್ತದೆ. ಈ ಶಾಂತಲಿಂಗಯ್ಯನ ಹೆಸರು ೧೩ನೆಯ ಶತಮಾನದ ಅಭಿನವ ಗೋಳಕಿಮಠದ ಪ್ರಧಾನ ಗುರು ಶಾಂತಶಿವನ ಹೆಸರಿನಂತೆಯೇ ಇದೆ. ವೆಂಕರಮಣಯ್ಯ ಈ ಶಾಂತಶಿವನನ್ನು ಕ್ರಿ.ಶ. ೧೫೦೬ರ ತಾಮ್ರಪಟದಲ್ಲಿ ದಾಖಲಾಗಿರುವ ದತ್ತಿಯ ದಾನಿಯಾದ ಕುಮಾರಲಿಂಗಯ್ಯನೊಂದಿಗೆ ಸಮೀಕರಿಸುತ್ತಾರೆ.[೭೯] ಅದೇನೇ ಇರಲಿ,

ಕ್ರಿ.ಶ. ೧೮೧೦ರಲ್ಲಿ ಬರೆದ ಶ್ರೀಶೈಲಮ್ ಕೈಫಿಯತ್ತು ಭಿಕ್ಷಾವೃತ್ತಿ ಶಾಂತಲಿಂಗಯ್ಯನ ಬಿರುದಾವಳಿಯನ್ನು ಹೀಗೆ ಉದಾಹರಿಸುತ್ತದೆ:

ಸ್ವಸ್ತಿಶ್ರೀ ತ್ರಿಭುವನೈಕ ತ್ರಿಲಕ್ಷಗ್ರಾಮ ಗೋಳಕಿ ಮಹಾಮಠಸ್ಯ
ಸಾಮ್ರಾಜ್ಯಪಟ್ಟಭದ್ರ ಶ್ರೀಮದ್ ರಾಜಗುರು ಚರಣ ಸರಸೀರುಹಭೂಷಿತ
ಮಸ್ತಕುಲು ಶ್ರೀ ತ್ರಿಪುರಾಂತಕದೇವ ದಿವ್ಯ ಶ್ರೀಪಾದ ಪದ್ಮಾರೂಢಕುಲೈನ
ಶ್ರೀ ಪರ್ವತಾಮಲ ಬಸವ ಗೋಳಕಿಮಠಮು ಶ್ರೀಮತು ನಿಜಗುರು ಶಾಂತಪೂರ್ವ ದೇಶಿಕುಲು.

ಇದು IAP-CP. 142ರಲ್ಲಿ ಕೊಟ್ಟಿರುವ ಶಾಂತಶಿವನ ಬಿರುದಾವಳಿಯನ್ನು ನಿಕಟವಾಗಿ ಹೋಲುತ್ತದೆ. ಸ್ವಲ್ಪ ಭಿನ್ನವಾಗಿರುವ ಭಾಗಗಳು ಕೆಳಕಂಡಂತೆ ಇವೆ:

೧. ತ್ರಿಭುವನೈಕತಿಲಕ ತ್ರಿಲಕ್ಷ ಗ್ರಾಮಗೋಳಕಿ ಮಹಾಮಠಸಾಮ್ರಾಜ್ಯಪಟ್ಟಬದ್ಧ
೨. ಶ್ರೀಪರ್ವತಮು ಅಭಿನವಗೋಳಕಿ ಮಠಮು

ಈ ಇಬ್ಬರೂ (ಶಾಂತಶಿವ, ಶಾಂತಲಿಂಗ) ವ್ಯಕ್ತಿಗಳು 'ಶಾಂತ' ಎಂಬ ಹೆಸರನ್ನೆ ಹೊತ್ತಿರುವುದರಿಂದ ಜಾಣತನ ಬಳಸಿ 'ಅಭಿನವ' ಮತ್ತು 'ಬಸವ' ಶಬ್ದಗಳನ್ನು ಬದಿಗೊತ್ತಿ ಭಿಕ್ಷಾವೃತ್ತಿ ಶಾಂತಲಿಂಗಯ್ಯನೂ ಈ ಬಿರುದಾವಳಿಯನ್ನೇ ಬಳಸಿಕೊಂಡಿರಬಹುದು.

ಶಾಂತಲಿಂಗಯ್ಯನಿಗೆ ಈ ಬಿರುದಾವಳಿಯನ್ನು ನಿಜವಾಗಿಯೆ ಹಚ್ಚಲಾಗಿರಲಿ ಇಲ್ಲವೆ ಕೈಫಿಯತ್ತಿನ ರಚನಕಾರನು ಅವನಿಗೆ ಆರೋಪಿಸಿರಲಿ, ಗೋಳಕಿಮಠದ ಶಾಂತಶಿವನ ಈ ಬಿರುದಾವಳಿಯುಳ್ಳ ಯಾವ ಶಾಸನವೂ ಶ್ರೀಶೈಲಮ್‌ದಲ್ಲಿ ಉಳಿದಿಲ್ಲ. ಆದರೆ, ತ್ರಿಪುರಾಂತಕಮ್‌ದಲ್ಲಿ ಒಂದೇ ಒಂದು ಉಳಿದಿದೆ (SII X . 400). ಇಷ್ಟು ತಡವಾಗಿಯೂ ಈ ಬಿರುದಾವಳಿ ಕಂಡುಬರುವುದು, ಶತಶತಮಾನಗಳ ವರೆಗೂ ಗೋಳಕಿಮಠ ಪರಂಪರೆಯ ಪ್ರಭಾವವು ಆಂಧ್ರ ಧರ್ಮ ಮತ್ತು ಸಮಾಜದ ಮೇಲೆ ಬಿದ್ದುದಕ್ಕೆ ಸಾಕ್ಷಿಯೆಂದೇ ಪರಿಗಣಿಸಬಹುದು.

ಕ್ರಿ.ಶ. ೧೨೩೪ಕ್ಕಿಂತ ಪೂರ್ವದಲ್ಲಿ ಯಾವಾಗಲೋ (ಉತ್ತರ ಭಾರತದ) ಕಲಚೂರಿ ರಾಜ್ಯದಿಂದ ವಲಸೆಬಂದ, ಧರ್ಮಶಿವ ತಂದ ಗೋಳಕಿಮಠವು ಕಾಕತೀಯ ಅರಸ ಗಣಪತಿಗೆ ರಾಜಗುರುವಾಗಿದ್ದ ವಿಶ್ವೇಶ್ವರನ ಕಾಲದಲ್ಲಿ ಸು. ಕ್ರಿ.ಶ. ೧೨೫೦ರ ಮಧ್ಯೆ ಅತ್ಯುನ್ನತ ಮಟ್ಟದ ರಾಜಾಶ್ರಯಕ್ಕೆ ಏರಿತು. ಮಲ್ಕಾಪುರಮ್‌ದಂಥ ಸ್ಥಳಗಳಲ್ಲಿ ನೂತನ ಧಾರ್ಮಿಕ ಕೇಂದ್ರಗಳನ್ನು ಸ್ಥಾಪಿಸುವುದರ ಜೊತೆಗೆ ಗೋಳಕಿಮಠವು ಆ ಕಾಲದ ಕೆಲವು ಪುಣ್ಯಸ್ಥಳಗಳಾಗ ಕಾಲೇಶ್ವರಮ್, ಮಂತ್ರಕೂಟ, ಈಲೇಶ್ವರಮ್, ತ್ರಿಪುರಾಂತಕಮ್ ಮತ್ತು ಶ್ರೀಶೈಲಮ್‌ಗಳಲ್ಲಿ ಮಠಗಳನ್ನು ಸ್ಥಾಪಿಸಿತು. ವಿಶ್ವೇಶ್ವರಶಿವನ ಶಿಷ್ಯನಾದ ಶಾಂತಶಿವನು ಗೋಳಕಿಮಠದ ಮೂರನೆಯ ಪ್ರಮುಖ ಅನುಯಾಯಿ. ಅವನು ಕೊನೆಯ ಎರಡು ಕೇಂದ್ರಗಳಲ್ಲಿ ಮಠಾಧಿಪತಿಯಾಗಿದ್ದ. ಅವನ ಕಾಲದ ತರುವಾಯ, ಶ್ರೀಶೈಲಮ್‌ದಲ್ಲಿಯೂ ತ್ರಿಪುರಾಂತಕಮ್‌ದಲ್ಲಿಯೂ ಗೋಳಕಿಮಠದ ಯಾವ ಸದಸ್ಯನೂ ಸಕ್ರಿಯನಾಗಿರಲಿಲ್ಲವೆಂಬುದು ನಿಜ ಸಂಗತಿ. ಮತ್ತು ಆಂಧ್ರದಲ್ಲಿ ಗೋಳಕಿಮಠದ ಹೆಸರು ಕೂಡ ಸರಿಸುಮಾರು ಕಣ್ಮರೆಯಾಯಿತು. ಗೋಳಕಿಮಠದೊಂದಿಗೆ

ಸಂಬಂಧ ಹೊಂದಿರಬಹುದಾದ ವ್ಯಕ್ತಿಗಳು ದೇವಾಲಯಗಳ ಆಡಳಿತಗಾರರ ದಾಖಲೆಗಳಲ್ಲಿ ಕಂಡುಬರುವರಾದರೂ ಮಠಗಳ ಪ್ರಧಾನ ಗುರುಗಳಾಗಿ ಅಲ್ಲ. ಆಂಧ್ರ ಗೋಳಕಿಮಠದ ಅವನತಿಯ ಒಂದು ಕಾರಣವೆಂದರೆ ಅದರ ಕೆಲವು ಸದಸ್ಯರು ಬ್ರಹ್ಮಚರ್ಯವ್ರತ ತ್ಯಜಿಸಿ ಗೌಣಮಠಗಳ ಆನುವಂಶೀಯ ಸ್ಥಾನಪತಿಗಳಾದುದು ಎಂಬುದನ್ನು ನಾನು ಈಗಾಗಲೇ ಸೂಚಿಸಿರುವೆ. ಎರಡನೆಯ ಹಾಗೂ ಬಹುಶಃ ಅಧಿಕ ಮಹತ್ವದ ಕಾರಣವೆಂದರೆ, ಜನಪ್ರಿಯವಾಗಿದ್ದ ಮತ್ತು 'ಅಸಂಖ್ಯಾತ ಮಾಹೇಶ್ವರರು' ಪ್ರತಿನಿಧಿಸುತ್ತಿದ್ದ ಶೈವಮತವು ವೀರಶೈವ ಮತದೊಂದಿಗೆ ಜೊತೆಗೂಡಿದುದು. ೧೪ನೆಯ ಶತಮಾನದ ಆರಂಭದಲ್ಲಿ ವೀರಶೈವಮತವು ಪ್ರಮುಖ ಒಳನಾಡ ದೇವಾಲಯ ಸಂಕೀರ್ಣಗಳ ನಿಯಂತ್ರಣವನ್ನು ಕಿತ್ತುಕೊಳ್ಳುವಲ್ಲಿ ಯಶಸ್ವಿಯಾಯಿತು. ಆದರೂ, ತನ್ನ ಪ್ರಾಬಲ್ಯದ ಅಲ್ಪಾವಧಿಯಲ್ಲಿ ಆಂಧ್ರನಾಡಿನಲ್ಲಿ ಸಾಕಷ್ಟು ಭದ್ರವಾಗಿ ಸ್ಥಾಪಿಸಿಕೊಂಡಿದ್ದರಿಂದಾಗಿ, ಗೋಳಕಿಮಠದ ಮೊದಲಿನ ಸಾಂಸ್ಥಿಕ ಗರಿಮೆಯ ಕುರುಹುಗಳು ಮುಂದುವರಿದವು. ಪರಿಣಾಮವಾಗಿ, ತನ್ನ ಉಚ್ಛ್ರಾಯಕಾಲದಲ್ಲಿ ವೀರಶೈವ ದಾರ್ಶನಿಕ ಮತ್ತು ವ್ರತಾಚರಣೆಗಳ ಬೆಳವಣಿಗೆಯ ಮೇಲೆ ಅದು ಪ್ರಬಲವಾದ ಪ್ರಭಾವ ಬೀರಿರಲು ಸಾಕು; ಆದ್ದರಿಂದ, ಆಂಧ್ರ ಮತ್ತು ಕರ್ನಾಟಕಗಳ ಮಧ್ಯಯುಗೀನ ಶೈವಮತದ ಬೆಳವಣಿಗೆಯ ಯಾವುದೇ ಮೌಲ್ಯನಿರ್ಣಯದಲ್ಲಿ ಅದನ್ನು ನಿರ್ಲಕ್ಷಿಸುವಂತಿಲ್ಲ.

## ಸಂಕ್ಷಿಪ್ತಗಳು/Abbreviations

| | |
|---|---|
| APRE | Andhra Pradesh (Government) Report on Epigraphy |
| ARIE | Annual Report on (South) Indian Epigraphy |
| HAS | Hyderabad Archaeological Series |
| IAP-CP | Inscriptions of Andhra Pradesh: Cuddapah Dist., Vol. 1 |
| IAP-KN | Inscriptions of Andhra Pradesh: Karimnagar District |
| IAP-WG | Inscriptions of Andhra Pradesh: Warangal District |
| JAHRS | Journal of the Andhra Historical Research Society |
| NDI | Nellore District Inscriptions |
| SII | South Indian Inscriptions |

## ಟಿಪ್ಪಣಿಗಳು/References

1 Notably V.S. Pathak, *History of Saiva Cults in Northern India* (Allahabad: Abinash Prakashan, 1980), pp. 22 and 46-50 and Pranabanada Jash, *History of Saivism* (Calcutta: Ray and Chaudhury, 1974) pp. 21 and 24.

2 V.V. Mirashi, *Corpus Inscriptionum Indicarum IV: Inscriptions of the Kalachuri- Chedi Era* (Ootacamund: Govt. Epigraphist for India, (1955), pp. clvii-clix; and R.K. Sharma, *The Kalachuris and Their Times* (Delhi: Sundeep Prakashan, 1980), p. 259

3 The Jabalpur Stone Inscription of Jayasimha (CII IV. 64) in particular and also the Chandrehe Stone Ins. of Prabodhasiva (CII IV. 44) and the Gurgi Stone Ins. of Kokalladeva II (CII IV. 46), if the identity of the Prabhava-siva of these records with the Sadbhava-sambhu of the Malkapuram Ins. is accepted as Pathak suggests (pp. 46-47). D.C. Sircar has equated the Vama-sambhu of the latter record with the Vamadeva mentioned in many Tripuri Kalacuri inscriptions from the mid 11th century onwards (EI XXX, pp. 46-51).

4 B.G.L. Swamy, "The Golaki School of Saivism in the Tamil Country, " *Journal of Indian History*, LIII, Pt. 2 (Aug. 1975), p. 181

5. Exceptions are two articles- Nidaduvolu Sundaresvara Rao, "Golagi Mathamulu-Andhradesa," *Bharati* LIV (1977), no 10, pp. 56-65 and no. 11, pp. 19-35 and B.G.L. Swamy, op. cit. In addition, the Andhra Golaki Matha is discussed on pp. 706-710 of the chapter on the Kakatiyas by N. Venkataramanayya and M. Somasekhara Sarma in G. Yazdani ed., *Early History of the Deccan* (OUP, 1960) and on pp. 275-78 of P.V. Parabrahma Sastry's *The Kakatiyas of Warangal* (Hyderabad: Govt. of A.P., 1978).

6. In chronological order: APRE 197 of 1965; SII IV. 1056; ARIE 293 of 1936-37; IAP-WG. 65; SII X. 315; ARIE 294 of 1936-37; ARIE 301 of 1936-37; SII X. 338; SII X. 340; SII X 345; NDI Darsi 25: NDI Darsi 28; ARIE 301 of 1930-31; ARIE 50 of 1941-42; IAP-CP. 142; ARIE 89 of 1958-59; ARIE 94 of 1958-59; ARIE 145 of 1954-55; SII X. 395; ARIE 289 of 1930-31; ARIE 4 of 1955-56; SII X, 399; ARIE 40 of ; 942-43; SII X 400; ARIE 26 of 1970-71; NDI Darsi 74; ARIE 307 of 1936-37; SII V. 129; SII X. 452; SII X. 453; SII X. 454; SII X. 396; ARIE 320 of 1937-38; ARIE 321 of 1937-38; ARIE 322 of 1937-38; ARIE 22 of 1942-43; ARIE 323 of 1937-38; IAP-CP. 146; SII X. 388; ARIE 323 of 1905. I wish to express my gratitude to Dr. K.V. Ramesh, Director of Epigraphy, Archaeological Survey of India, for kindly giving me access to many unpublished inscriptions, without which this paper would not have been possible. I am also indebted to Dr. S.S. Ramachandra Murthy (Oriental Research Institute, Sri Venkatesvara University) for so generously and patiently imparting to me some understanding of Telugu inscriptions.

7. Swamy has been more discriminating than Sundaresvara Rao (p. 62 of *Bharati* LIV no. 10 and pp. 19-21 of no. 11) but exhibits this tendency in pp. 168-70 of his article previously cited.

8. APRE 244 of 1966 (1293 A.D.) from Lingala, Kurnool dist., records a land grant to the deity Mallikarjuna of Sriparvata in care of a Parama-sivaradhyulu. The name of this guru is read as Parama-Sivacarya by the Office of the Chief Epigraphist in their summary of the same inscription in ARIE 55 of 1943-44. In both readings Parama-siva is associated with the Kalmatha. SII X. 504 (1313 A.D.) from Srisailam mentions Isvara-siva[ca]rya of the Arasa Matha. Neither of these *mathas* seems to be connected with Golaki Matha. In addition to the title 'acarya', the Golaki Matha members also used the titles 'desika', 'gurudevara' and mahamuni'"

9. Sundaresvara Rao includes the Nanda-siva appearing in SII X. 432 (op. cit., no. 10, p. 60) as a member of the Golaki lineage but the inscription

43. SII X. 388.

44. The Malkapuram Ins. states that Kakatiya Ganapati gave one village for a *Satra* to Visvesvara -siva who also set up a *satra* at Malkapuram.

45. Parabrahma Sastry, p. 279.

46. Puspagiri in Cuddapah district has often been included among the Andhra sites where the Golaki Matha was established. The reason for this appears to be existence of a heavily damaged inscription in Tamil from the Indranathaswami temple which refers to the Golaki Matha. This inscription (ARIE 323 of 1905) is not dated nor are any other details provided in the summary. Bearing in mind the fact that none of the other inscriptions of the relevant period from this site refer to Golaki Matha, I do not believe there are sufficient grounds for asserting Golaki Matha presence at Pushpagiri. Two Saiva ascetics, Isana-guru and Soma-siva, associated with Pushpagiri in inscriptions found elsewhere likewise can not be affiliated with the Golaki Matha without further evidence. Several other Saiva gurus may possibly be associated with Golaki Matha. At Elesvaram,

where Visvesvara-siva is known to have erected a *matha* sometime before 1261 A.D., we get records referring to Bhavabrahma-gurudevara in 1250 A.D. (*Corpus of Telangana Inscriptions* IV 30) and to Daksinamurti=gurudevara c. 1271 A.D. (APRE 349 of 1964). From Somasila in Mahbubnagar district, which may be the same place as the Uttara-somasila where Visvesvara-siva consecrated a linga in his own name, we have two inscriptions involving a Sankara-sivacarya, the son of the Racaguru Prasanna-sivacarya, dated 1295 A.D. (ARIE 37 of 1976-77) and 1297 A.D. (APRE 255 of 1966). An Aghora-sivacarya appears in a 1313 A.D. inscription from Warangal as the head of the Sahasralinga Ganapati temple (IAP-WG. 89=HAS XIII. 16)

47. SII X. 465 (1290 A.D.) and also NDI Darsi 1 from Aluvulapadu (c. 1272 A.D.); ARIE 188 of 1905 (c. 1271 A.D. ) and SII X. 428 (c. 1270 A.D.); SII X. 502 (1312A.D.) respectively.

48. Sundaresvara Rao, *Bharati* no. 10, p. 60.

49. EI XXVII. 35.

50. Sila-matha in IAP-WG. 15=HAS 13.7 and Kalmatha in APRE 244 of 1966= ARIE 55 of 1943-44 (see note 8 above).

51. SII X. 404

52. SII X. 503 and 504; ARIE 41 of 1915

53. See also SII X. 452

54. R.C. Nandi, *Religious Institutions and Cults in the Deccan*, pp. 96 and 99;S. Gurumurthy, *Education. in South India* (Madras: New Era, 1979), pp. 16 and 24

55. p. 127-in reference to *Epigraphia Carnatica* VII Sk. 150

56. "Origin and Nature of Saivaite Monasticism: The Case of the Kalamukhas," p. 193

57. EC V. Belur 117

58. T.V. Mahalingam, "A Family of Pasupata Grhastas at Jambukesvaram", discuss the inscription ARIE 135 of 1936-37.

59. IAP-WG. 99 and 100. Other inscriptions mentioning him are IAP-WG. 95-98.

60. Parabrahma Sastry, *The Kakatiyas*, p. 276.

61. Lorenzen, p. 51; Parabrahma Sastry, *Srisailam, Its History and Cult* (Hyderabad, 1982), pp. 30-36.

62. In the fourfold classification commonly found in the Kakatiya period inscriptions, the western gateway of Sriparvata was Alampur and the southern Siddhavatam. At times Pushpagiri is alternatively termed the southern gateway.

63. SII X. 504 (1313A.D.) & ARIE 41 of 1915 (1315 A.D.) from Srisailam; HAS XIX Mn. 38. (1320 A.D.) from Umamahesvaram; SII X. 502 (1312 A.D.) from Tripurantakam.

64. *Srisailam, Its History and Cult.* p. 17.

65. B.K. Pandeya, *Temple Economy Under the Colas* (New Delhi: Bahri Publications, 1984), p. 91

66. P.B. Desai, *Basavesvara and His Times* (Dharwar: Kannada Research Institute, 1968), p. 124.

67. *Srisailam. Its History and Cult*, p. 34.

68. An example of *"pregada"* used in the meaning of temple official is found in ARIE 41 of 1915 (1315 A.D.) from Srisailam which records an agreement between Asamkhyata Mahesvaras on the one hand and the *gurudevaras and pregadas* of Kalu *matha* and Arsi *matha* on the other hand, about the conduct of worship and festivals.

69. P.B. Desai, pp. 327-28.

70. N.Venkataramanayya and M. Somasekhara Sarma, pp. 710-11.

71. *Ibid.*, p. 711

72. They both also offer all food first to the linga before eating and thus will not eat temple *prasada* as it has been offered already. Neither observe the *sraddha* ceremony but replace it with one called *aradhana*. See Edgar Thurston, *Castes and Tribes of Southern India* (reprint, Delhi: Cosmo Publication, 1975) under "Aradhya" and "Lingayat".

73. K. Ishwaran, *Religion and Society among the Lingayats of South India* (Delhi: Vikas Publishing 1983), pp. 58-59.

74. M. Rama Rao, *The Temples of Srisailam* (Hyderabad: Govt. of A.P. 1969),

pp. 4-5.

75. SII XVI. 7. Srisailam is also equated with Kailasa in SII X. 504 (1313 A.D.) from Srisailam itself.

76. S. Krishnaswami Ayyangar, *Sources of Vijayanagara History* (Univ. of Madras, 1919), pp. 67-68.

77. See particularly ARIE 1923-24 part II, p. 114 which describes Nos. 193, 209, 211 and 213 of 1924, all 16th century records from Piranmadai, Tiruppatur taluk, Ramnad district. All three terms are used in the above but B.G.L. Swamy believes that the Bhiksa-matha or Laksadhayi-santana was a sublineage within the Golaki school (pp. 168-81).

78. p. 708.

79. *Epigraphia Andhrica* I, p. 47.

80. P. Sitapati ed., *Srisaila Devalaya Kaifiyatu Part 2* (Hyderabad; Govt. of A.P., 1982), p. 9.



## ಸಮಗ್ರ ಲಿಂಗಾಯತ ನೂತನ ಸಾಹಿತ್ಯ ರತ್ನಮಾಲೆ

### ಇತ್ತೀಚಿನ ಪ್ರಕಟಣೆಗಳು

ನಿರಂಜನ ಜಂಗಮವಂಶದರ್ಪಣ
ಶಾಸನಗಳಲ್ಲಿ ಶಿವಶರಣರು
ವಚನಶಾಸ್ತ್ರ ಸಾರ
ವಚನಸಾಹಿತ್ಯ : ಒಂದು ಸಾಂಸ್ಕೃತಿಕ ಅಧ್ಯಯನ
ರಾಮದುರ್ಗ ಸಂಸ್ಥಾನ ವಿಮೋಚನಾ ಹೋರಾಟ
ಬಸವ ಬೋಧಾಮೃತ
ಸಿರಸಂಗಿ ಸಂಸ್ಥಾನ : ಒಂದು ಅಧ್ಯಯನ
ಬೆಳಗಾವಿ ಜಿಲ್ಲೆ ವೀರಶೈವ ದೇಶಗತಿಗಳು
ವಚನಸಾಹಿತ್ಯದ ಪ್ರಾಚೀನ ಇತಿಹಾಸ
ವಚನಸಾಹಿತ್ಯದ ಪ್ರಾಚೀನ ಆಕರಕೋಶ
ತಿಂಥಿಣಿ ಮೋನಪ್ಪಯ್ಯ : ಒಂದು ಅಧ್ಯಯನ
ಶಿವಾಜಿ ಮಲ್ಲಮ್ಮಾಜಿ ಸಮರೋತ್ಸವ
ಗರುಡ ಸದಾಶಿವರಾಯರು
ವೀರಶೈವ ಹಸ್ತಪ್ರತಿಗಳ ಪುಷ್ಪಿಕೆಗಳು
ಕರ್ನಾಟಕದ ಜನಪದ ಚಿತ್ರಕಲೆ
ಸ್ವಾದಿ ಅರಸುಮನೆತನ
ಕರಪಾಲ ಬಸವಪುರಾಣ
ಮಾಯಾಕೋಲಾಹಲ
ವಡ್ಡಾರಾಧನೆ
ಜಾವಳಿ ಸಮಗ್ರ ಕಾವ್ಯ
ಅನುಭಾವಿಗಳ ಕ್ರಾಂತಿ
ಪಟ್ಟಣಶೆಟ್ಟಿ ಸಮಗ್ರ ಕಾವ್ಯ
ಲಿಂಗಲೀಲಾ ವಿಲಾಸ ಚಾರಿತ್ರ್ಯ ಸಂಗ್ರಹ
ಇಷ್ಟಲಿಂಗದ ವೈಜ್ಞಾನಿಕ ಅನುಭವ
ಪುಷ್ಪಮಾಲೆ
ವಚನ ನಿಘಂಟು
ವಚನಶಾಸ್ತ್ರಸಾರ ಭಾಗ – ೩
ಬಸವಣ್ಣ – ಕುವೆಂಪು
ಶುದ್ಧಶೈವ ಮತ್ತು ಗೋಳಕಿಮಠ ಸಂಪ್ರದಾಯ



ಲಿಂಗಾಯತ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ